CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೦೩, ೨೦೦೫ (ಮಾಘ ೧೪, ಶಕ ವರ್ಷ ೧೯೨೬) | ಸಂಚಿಕೆ ೫ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಕೆ. ಮರಿಯಪ್ಪ, ನಿವೃತ್ತ ಉಪನ್ಯಾಸಕರು, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಗುಲ್ಬರ್ಗಾ, ಹಾಗೂ ಶ್ರೀ ನಾಮದೇವ ರಾಥೋಡ್, ಮುಖ್ಯ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ರಾಣಾಪುರ ತಾಂಡ, ಚಿಂಚೊಳ್ಳಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರುಗಳ ವಿರುದ್ದದ ಶಿಸ್ತು ಕ್ರಮ-ಅಂತಿಮ ಆದೇಶ.

**ಓದಲಾಗಿದೆ :**

1. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಗೂ ಶಿಸ್ತು, ಪ್ರಾಧಿಕಾರ, ಇವರು ಜಾರಿಗೊಳಿಸಿದ ಕಾರಣ ಕೇಳುವ ನೋಟೀಸು ಸಂಖ್ಯೆ: ಸಿ2(3) ದೂರು.16:94-95, ದಿನಾಂಕ: 26.06.96 ಮತ್ತು 26.07.96.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಗೂ ಶಿಸ್ತು, ಪ್ರಾಧಿಕಾರ, ಇವರ ಜ್ಞಾಪನಾ ಸಂ:ಸಿ2(3) ದೂರು.16:94-95, ದಿನಾಂಕ: 27.05.2000 ಮತ್ತು 05.06.2000.
3. ರೀಡರ್, ಸಿಟಿಇ ಗುಲ್ಬರ್ಗಾ ಹಾಗೂ ವಿಚಾರಣಾಧಿಕಾರಿ, ಇವರ ವರದಿ ಸಂಖ್ಯೆ: ಅ1:ವಿ:2000-01, ದಿನಾಂಕ: 24.03.2001.
4. ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಡಿ 138 ಡಿಜಿಡಿ 2002, ದಿನಾಂಕ: 04.02.2004.
5. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು, ಇವರ ಪತ್ರ ಸಂಖ್ಯೆ: ಪಿಎಸ್‌ಸಿ 42: ಸಿಎನ್‌ಎಸ್ 2004 ದಿನಾಂಕ: 27.07.2004 ಹಾಗೂ ದಿನಾಂಕ: 01.12.2004.

**ಪ್ರಸ್ತಾವನೆ:**

ಶ್ರೀ ನಾಮದೇವ ರಾಥೋಡ್, ಮುಖ್ಯ ಶಿಕ್ಷಕರು, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ರಾಣಾಪುರ ತಾಂಡ, ಚಿಂಚೋಳಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರು ಜೂನ್ 1992 ರಿಂದ ಏಪ್ರಿಲ್ 1993 ರವರೆಗೆ ಅನಧಿಕೃತ ಗೈರುಹಾಜರಾಗಿದ್ದರೂ ಸಹ, ಅನಧಿಕೃತ ಗೈರುಹಾಜರಿಗೆ ಸಂಬಂಧಿಸಿದಂತೆ ರಜೆ ಮಂಜೂರು ಮಾಡದಿದ್ದರೂ ಈ ಅವಧಿಗೆ ಸಂಬಂಧಿಸಿದಂತೆ ವೇತನದ ಬಾಬ್ತು ರೂ. 30,499/-ಗಳನ್ನು ಪಾವತಿಸಲು ಚಿತ್ತಾಪುರ ತಾಲ್ಲೂಕಿನ ಸಹಾಯಕ ಶಿಕ್ಷಣಾಧಿಕಾರಿಯಾಗಿದ್ದ ಶ್ರೀ ಕೆ. ಮರಿಯಪ್ಪ ಇವರು ನೇರ ಕಾರಣರಾಗಿದ್ದಾರೆಂಬ ಆರೋಪಗಳಿಗೆ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು ಶಿಸ್ತು ಪ್ರಾಧಿಕಾರಿಯಾಗಿ ಮೇಲೆ ಓದಲಾದ ಕ್ರಮಾಂಕ (1)ರಲ್ಲಿನ ಸೂಚನಾ ಪತ್ರದ ಮೂಲಕ ಆರೋಪಣಾ ಪಟ್ಟಿಯನ್ನು ಶ್ರೀ ಕೆ. ಮರಿಯಪ್ಪ ಹಾಗೂ ಶ್ರೀ ನಾಮದೇವ ರಾಥೋಡ್ ಇವರುಗಳಿಗೆ ಜಾರಿಗೊಳಿಸಿ, ಅವರುಗಳಿಂದ ಹೇಳಿಕೆಯನ್ನು ಪಡೆದ ನಂತರ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮಾಂಕ (2)ರ ಆದೇಶದ ಮೂಲಕ ರೀಡರ್, ಸಿಟಿಇ, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪನ್ಯಾಸಕರು, ಸಿಟಿಇ, ಗುಲ್ಬರ್ಗಾ, ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಿದ್ದರು. ವಿಚಾರಣಾಧಿಕಾರಿಯವರು ನಿಯಮಾನುಸಾರ ವಿಚಾರಣೆ ನಡೆಸಿ, ಮೇಲೆ ಓದಲಾದ ಕ್ರಮಾಂಕ (3)ರ ದಿನಾಂಕ: 24.03.2001ರಂದು ತಮ್ಮ ವಿಚಾರಣಾ ವರದಿಯನ್ನು ಆಯುಕ್ತರಿಗೆ ಸಲ್ಲಿಸಿದ್ದರು.

ಶ್ರೀ ಕೆ. ಮರಿಯಪ್ಪ, ಇವರು ದಿನಾಂಕ: 31.03.1999ರಂದು ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಕೆಸಿಎಸ್‌ಆರ್ ನಿಯಮ 214ರ ಮೇರೆಗೆ ಶಿಸ್ತು ಕ್ರಮದಲ್ಲಿ ಮುಂದಿನ ಕ್ರಮ ಕೈಗೊಳ್ಳುವಂತೆ ದಿನಾಂಕ: 13.10.2003ರಂದು ವಿಚಾರಣಾ ವರದಿ ಹಾಗೂ ದಾಖಲೆಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು. ವಿಚಾರಣಾ ವರದಿಯಲ್ಲಿನ ನಿರ್ಣಯ ಹಾಗೂ ಅದಕ್ಕೆ ಪೂರಕವಾದ ದಾಖಲೆಗಳನ್ನು ಪರಿಶೀಲಿಸಿದಾಗ ಶ್ರೀ ಕೆ. ಮರಿಯಪ್ಪ, ನಿವೃತ್ತ ಉಪನ್ಯಾಸಕರು, ಇವರು ನಿಯಮಬಾಹಿರವಾಗಿ ಅನಧಿಕೃತ ಗೈರುಹಾಜರಾಗಿದ್ದ ಶ್ರೀ ನಾಮದೇವ ರಾಥೋಡ್, ಇವರಿಗೆ 11 ತಿಂಗಳ ವೇತನ ಬಿಲ್ಲಿಗೆ ಸಹಿ ಹಾಕಿ ವೇತನ ಪಾವತಿಸಲು ಕಾರಣರಾದ ಆರೋಪವು ಸಾಬೀತಾಗಿದೆ. ಶ್ರೀ ನಾಮದೇವ ರಾಥೋಡ್, ಇವರು ಜೂನ್ 92 ರಿಂದ ಏಪ್ರಿಲ್ 93ರವರೆಗೆ ಅನಧಿಕೃತ ಗೈರು ಹಾಜರಾದ ಆರೋಪವು ಸಾಬೀತಾಗಿರುವುದಲ್ಲದೆ ಈ ಅವಧಿಯಲ್ಲಿ ಅನಧಿಕೃತವಾಗಿ ವೇತನ ರೂ.30,499/-ಗಳನ್ನು ಪಡೆದಿದ್ದು, ಅದರಲ್ಲಿ ರೂ.24,000/-ಗಳು ವಸೂಲಾಗಿದ್ದು, ರೂ.6,499/-ಗಳು ಸದರಿಯವರಿಂದ ದುರುಪಯೋಗವಾದ ಆರೋಪವೂ ಸಹ ಸಾಬೀತಾಗಿದೆ. ಆದ್ದರಿಂದ 2 ಆಪಾದಿತರ ಮೇಲಿನ ಆರೋಪವು ವಿಚಾರಣೆಯಲ್ಲಿ ಸಾಬೀತಾಗಿರುವುದನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರವು ಸಂಪೂರ್ಣವಾಗಿ ಒಪ್ಪಿದೆ.

ಶ್ರೀ ಕೆ. ಮರಿಯಪ್ಪ, ಇವರ ಪ್ರಕರಣವು ಕೆಸಿಎಸ್‌ಆರ್ ನಿಯಮ 214ರ ವ್ಯಾಪ್ತಿಯಲ್ಲಿ ಬರುವುದರಿಂದ ಇವರಿಗೆ ದಂಡನೆ ವಿಧಿಸುವ ಸಂಬಂಧದಲ್ಲಿ ಮೇಲೆ ಓದಲಾದ ಕ್ರಮಾಂಕ (5)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆಯಲಾಗಿದೆ.

ಶ್ರೀ ಕೆ. ಮರಿಯಪ್ಪ ಹಾಗೂ ಶ್ರೀ ನಾಮದೇವ ರಾಥೋಡ್, ಇವರುಗಳಿಗೆ ಸಾಬೀತಾದ ಆರೋಪಕ್ಕೆ ಸಂಬಂಧಿಸಿದಂತೆ ಸರ್ಕಾರವು ಕೆಳಕಂಡಂತೆ ದಂಡನೆ ವಿಧಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 138 ಡಿಜಿಡಿ 2002, ಬೆಂಗಳೂರು, ದಿನಾಂಕ: 12ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಕೆಳಕಂಡ ನಿವೃತ್ತ ಅಧಿಕಾರಿ:ನೌಕರರಿಗೆ ಅವರುಗಳ ಮುಂದೆ ನಮೂದಿಸಲಾದ ದಂಡನೆಯನ್ನು ವಿಧಿಸಿ ಆದೇಶಿಸಿದೆ.

| | ನಿವೃತ್ತ ನೌಕರ: ನೌಕರರ ಹೆಸರು | ವಿಧಿಸಿರುವ ದಂಡನೆ |
|---|---|---|
| 1) | ಶ್ರೀ ಕೆ. ಮರಿಯಪ್ಪ, ನಿವೃತ್ತ ಉಪನ್ಯಾಸಕರು, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಗುಲ್ಬರ್ಗಾ | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇವರ ನಿವೃತ್ತಿ ವೇತನದಿಂದ ಶೇ.5 (ಐದು) ರಷ್ಟನ್ನು ತಕ್ಷಣದಿಂದ ಜಾರಿಗೆ ಬರುವಂತೆ ಖಾಯಂ ಆಗಿ ಕಡಿಮೆ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ. |
| 2) | ಶ್ರೀ ನಾಮದೇವ ರಾಥೋಡ್, ಮುಖ್ಯ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ರಾಣಾಪುರ ತಾಂಡ, ಚಿಂಚೋಳ್ಳಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. | ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 8(viii)ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದೆ. ಹಾಗೂ ಸರ್ಕಾರಕ್ಕಾಗಿರುವ ನಷ್ಟ ರೂ.6,499/- ಅನ್ನು ಶೇ.8 ರಂತೆ ಬಡ್ಡಿ ಸಮೇತ ಸಿವಿಲ್ ದಾವೆ ಹಾಕಿ ವಸೂಲಿ ಮಾಡಲು ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ಇವರಿಗೆ ಆದೇಶಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್.142

**ವಿಷಯ :** ಖಾಸಗಿ ಅನುದಾನಿತ ಸಂಯುಕ್ತ ಪದವಿ ಕಾಲೇಜುಗಳಿಂದ ಪದವಿ ಪೂರ್ವ ಶಿಕ್ಷಣವನ್ನು ಬೇರ್ಪಡಿಸಿರುವ ಪ್ರಕ್ರಿಯೆ ಪೂರ್ಣಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ-313-ಯುಪಿಸಿ-92 ದಿನಾಂಕ: 17.06.97.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ-140-ಡಿಸಿಇ-2000 ದಿನಾಂಕ: 09.05.2001.
3. ಸರ್ಕಾರಿ ಪತ್ರ ಸಂಖ್ಯೆ: ಇಡಿ 220 ಯುಪಿಸಿ 2001 ದಿನಾಂಕ: 09.05.2001.
4. ಕಾಲೇಜು ಶಿಕ್ಷಣ ಆಯುಕ್ತರ ಆದೇಶ ಸಂಖ್ಯೆ: ಕಾಶಿಇ-99-ಇತರೆ ಆಡಳಿತ 2001 ದಿನಾಂಕ: 09.05.2001.
5. ಸರ್ಕಾರಿ ಮತ್ತು ಖಾಸಗಿ ಅನುದಾನಿತ ಸಂಯುಕ್ತ ಪದವಿ ಕಾಲೇಜುಗಳಿಂದ ಪದವಿ ಪೂರ್ವ ಶಿಕ್ಷಣವನ್ನು ಬೇರ್ಪಡಿಸಿರುವ ಪ್ರಕ್ರಿಯೆ ಪೂರ್ಣಗೊಳಿಸುವ ಬಗ್ಗೆ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) ರವರ ಅಧ್ಯಕ್ಷತೆಯಲ್ಲಿ ದಿನಾಂಕ: 03.12.2004ರಂದು ಜರುಗಿದ ಸಭಾ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 17.06.97ರ ಆದೇಶದಲ್ಲಿ 14 ಸರ್ಕಾರಿ ಕಾಲೇಜುಗಳಲ್ಲಿ ಪದವಿ ಪೂರ್ವ ಶಿಕ್ಷಣವನ್ನು ಬೇರ್ಪಡಿಸಿ ಕೆಲವು ಷರತ್ತಿಗೊಳಪಟ್ಟು ಪದವಿ ಪೂರ್ವ ಶಿಕ್ಷಣ ಇಲಾಖೆಗೆ ವರ್ಗಾಯಿಸಲು ಆದೇಶಿಸಲಾಗಿದೆ. ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 09.05.2001ರ ಆದೇಶದಲ್ಲಿ 17 ಸಂಯುಕ್ತ ಸರ್ಕಾರಿ ಪದವಿ ಕಾಲೇಜುಗಳಿಂದ ಪದವಿ ಪೂರ್ವ ಶಿಕ್ಷಣವನ್ನು ಬೇರ್ಪಡಿಸಿ ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಕೆಲವು ಷರತ್ತಿಗೊಳಪಟ್ಟು ವರ್ಗಾಯಿಸಲು ಆದೇಶಿಸಲಾಗಿದೆ. ಮೇಲೆ ಕ್ರಮಾಂಕ: (3)ರಲ್ಲಿ ಓದಲಾದ ದಿನಾಂಕ: 09.05.2001ರ ಸರ್ಕಾರಿ ಪತ್ರದ ಅನ್ವಯ ಖಾಸಗಿ ಅನುದಾನಿತ ಸಂಯುಕ್ತ ಪದವಿ ಕಾಲೇಜುಗಳಿಂದ ಪದವಿ ಪೂರ್ವ ತರಗತಿಗಳನ್ನು ಬೇರ್ಪಡಿಸಲು ಸರ್ಕಾರದ ಅನುಮೋದನೆ ದೊರಕಿಸಿಕೊಡಲಾಗಿತ್ತು. ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕ: 09.05.2001ರ ಕಾಲೇಜು ಶಿಕ್ಷಣ ಆಯುಕ್ತರ ಆದೇಶದನ್ವಯ 164 ಖಾಸಗಿ ಸಂಯುಕ್ತ ಪದವಿ ಕಾಲೇಜುಗಳಿಂದ ಪದವಿ ಪೂರ್ವ ಕಾಲೇಜುಗಳನ್ನು ಹಲವು ಷರತ್ತಿಗೊಳಪಟ್ಟು ಬೇರ್ಪಡಿಸಿ ಆದೇಶಿಸಲಾಗಿದೆ. ಆದಾಗ್ಯೂ ಖಾಸಗಿ ಅನುದಾನಿತ ಸಂಯುಕ್ತ ಪದವಿ ಕಾಲೇಜುಗಳಿಂದ ಪದವಿ ಪೂರ್ವ ಕಾಲೇಜುಗಳನ್ನು ಬೇರ್ಪಡಿಸಿರುವ ಕ್ರಮವು ಕೇವಲ ಕಾಗದದ ಮೇಲಿನ ಆದೇಶವಾಗಿಯೇ ಉಳಿದಿದೆ. ಆದ್ದರಿಂದ ಖಾಸಗಿ ಅನುದಾನಿತ ಸಂಯುಕ್ತ ಪದವಿ ಕಾಲೇಜುಗಳನ್ನು ವಿಭಜಿಸುವ ಕಾರ್ಯವಿಧಾನದ ಬಗ್ಗೆ ಚರ್ಚಿಸಲು ದಿನಾಂಕ: 03.12.2004ರಂದು ಸಭೆ ಕರೆಯಲಾಗಿತ್ತು. ಮೇಲೆ ಕ್ರಮಾಂಕ (5)ರಲ್ಲಿ ಓದಲಾದ ಸಭಾ ನಡವಳಿಯಲ್ಲಿ ತೆಗೆದುಕೊಂಡ ತೀರ್ಮಾನಗಳ ಪ್ರಕಾರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 283 ಯುಪಿಸಿ 2004, ಬೆಂಗಳೂರು, ದಿನಾಂಕ: 12ನೇ ಜನವರಿ, 2005**

ಖಾಸಗಿ ಅನುದಾನಿತ ಸಂಯುಕ್ತ ಪದವಿ ಕಾಲೇಜುಗಳ ವಿಭಜನೆಗೆ ಸಂಬಂಧಿಸಿದಂತೆ, ಈ ಕೆಳಕಂಡ ಕಾರ್ಯವಿಧಾನ ಜಾರಿಗೆ ತರಲು ಆದೇಶಿಸಲಾಗಿದೆ.

ಅ) ಪದವಿ ಮತ್ತು ಪದವಿ ಪೂರ್ವ ತರಗತಿಗಳು ಕಟ್ಟಡದ ಒಂದೇ ಆವರಣದಲ್ಲಿ ನಡೆಯುವಂತೆ ಆಡಳಿತ ಮಂಡಳಿಯು ತಾನು ಮಾಡಿಕೊಂಡಿರುವ ಈಗಿನ ವ್ಯವಸ್ಥೆಯನ್ನು ಮುಂದುವರಿಸಬಹುದಾಗಿದೆ. ಹಾಗೆಯೇ ಪೀಠೋಪಕರಣ, ಆಟದ ಮೈದಾನ, ಗ್ರಂಥಾಲಯ ಹಾಗೂ ಪ್ರಯೋಗಾಲಯಗಳ ಉಪಯೋಗದ ಬಗ್ಗೆಯೂ ಇದೇ ವ್ಯವಸ್ಥೆ ಮುಂದುವರಿಯತಕ್ಕದ್ದು.

ಆ) ವಿಭಜಿತ ಪದವಿ ಕಾಲೇಜಿಗೆ ಪದವಿ ಕಾಲೇಜಿನ ಪ್ರಾಂಶುಪಾಲರು ಮುಖ್ಯಸ್ಥರಾಗಿರತಕ್ಕದ್ದು. ಪದವಿ ಪೂರ್ವ ಕಾಲೇಜಿಗೆ ಹಂಚಿಕೆ ಮಾಡಿ ವರ್ಗಾಯಿಸಲ್ಪಟ್ಟ ಉಪನ್ಯಾಸಕರ ವೃಂದದವರ ಪೈಕಿ ಜ್ಯೇಷ್ಠತೆಯಲ್ಲಿ ಹಿರಿಯರಾದವರು ವಿಭಜಿತ ಪದವಿ ಪೂರ್ವ ಕಾಲೇಜಿಗೆ ಪ್ರಿನ್ಸಿಪಾಲರಾಗಿರತಕ್ಕದ್ದು. ಒಂದು ವೇಳೆ ಪದವಿ ಮತ್ತು ಪದವಿ ಪೂರ್ವ ಕಾಲೇಜು ಇವೆರಡಕ್ಕೂ ಸಂಬಂಧಿಸಿದಂತೆ ಒಟ್ಟಾರೆ, ತೀರ್ಮಾನ ತೆಗೆದುಕೊಳ್ಳಬೇಕಾದಲ್ಲಿ ಪದವಿ ಕಾಲೇಜಿನ ಪ್ರಾಂಶುಪಾಲರೇ ಅಂತಿಮ ತೀರ್ಮಾನ ತೆಗೆದುಕೊಳ್ಳತಕ್ಕದ್ದು. ಹಂಚಿಕೆಯಾದ ಬ್ಯಾಂಕ್ ಖಾತೆ, ಬೋಧನಾ ಶುಲ್ಕ ಮತ್ತು ಲೆಕ್ಕಶೀರ್ಷಿಕೆಯಡಿಯಲ್ಲಿ ವೇತನಕ್ಕಾಗಿ ಬರುವ ತಿಂಗಳ ಬಟವಾಡೆ ಬಗ್ಗೆ ಪ್ರತ್ಯೇಕ ಖಾತೆಯನ್ನು ಪದವಿ ಪೂರ್ವ ಕಾಲೇಜಿನಲ್ಲಿಯೂ ಸಹ ತೆರೆಯಬೇಕು. ಪದವಿ ಪೂರ್ವ ಕಾಲೇಜಿನ ಪ್ರಿನ್ಸಿಪಾಲರೂ ಡ್ರಾಯಿಂಗ್ ಆಫೀಸರ್ ಅಧಿಕಾರವನ್ನು ಹೊಂದಿರತಕ್ಕದ್ದು.

ಇ) ಮುಂಬರುವ 2005-06ನೇ ಸಾಲಿನ ಬಜೆಟ್‌ನಲ್ಲಿ ವಿಭಜಿತ ಪದವಿ ಪೂರ್ವ ಕಾಲೇಜುಗಳಿಗೆ ಪದವಿ ಪೂರ್ವ ನಿರ್ದೇಶನಾಲಯ ಪ್ರತ್ಯೇಕವಾಗಿ ಬಜೆಟ್ ಅವಕಾಶಗಳನ್ನು ಮಾಡಿಕೊಳ್ಳತಕ್ಕದ್ದು.

ಈ) ಬೋಧಕೇತರ ಸಿಬ್ಬಂದಿ ವರ್ಗದವರನ್ನು ಕಾರ್ಯಭಾರಕ್ಕೆ ಅನುಗುಣವಾಗಿ ಪದವಿ ಮತ್ತು ಪದವಿ ಪೂರ್ವ ಕಾಲೇಜುಗಳಿಗೆ ಹಂಚಿಕೆಯನ್ನು ಕಾಲೇಜಿನ ಆಡಳಿತ ಮಂಡಳಿಯವರೇ ಮಾಡಿಕೊಳ್ಳತಕ್ಕದ್ದು.

ಉ) ಪದವಿ ಪೂರ್ವ ಕಾಲೇಜಿಗೆ ಮಂಜೂರಾದ ಅನುದಾನಿತ ಹುದ್ದೆಗಳ ವಿವರಗಳನ್ನು ಕಾಲೇಜು ಶಿಕ್ಷಣ ನಿರ್ದೇಶಕರು ಪದವಿ ಪೂರ್ವ ನಿರ್ದೇಶಕರಿಗೆ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ವೇಣುಗೋಪಾಲ್**
ಸರ್ಕಾರದ ಉಪ ಕಾರ್ಯದರ್ಶಿ (ಪ್ರಭಾರ),
ಶಿಕ್ಷಣ ಇಲಾಖೆ.

ಪಿ.ಆರ್.143

**ವಿಷಯ :** ಶ್ರೀ ಸೈಯದ್ ಖಾಜಿಮ್ ಆಲಿ, ಪ್ರಾಂಶುಪಾಲರು, ಸರ್ಕಾರಿ ಪದವಿಪೂರ್ವ ಕಾಲೇಜು, ಮುನ್ನಳ್ಳಿ, ಬೀದರ್ ತಾಲ್ಲೂಕು ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 194 ಡಿಜಿಡಿ 2003 ದಿನಾಂಕ: 09.07.2004 ಹಾಗೂ ಅಧಿಸೂಚನೆ ದಿನಾಂಕ: 29.12.2004.
2. ಸೂಚನಾ ಪತ್ರ ಸಂಖ್ಯೆ: ಇಡಿ 194 ಡಿಜಿಡಿ 2003 ದಿನಾಂಕ: 07.07.2004.
3. ಶ್ರೀ ಸೈಯದ್ ಖಾಜಿಮ್ ಆಲಿ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 29.10.2004.

**ಪ್ರಸ್ತಾವನೆ:**

ಶ್ರೀ ಸೈಯದ್ ಖಾಜಿಮ್ ಆಲಿ, ಪ್ರಾಂಶುಪಾಲರು, ಸರ್ಕಾರಿ ಪದವಿಪೂರ್ವ ಕಾಲೇಜು, ಮುನ್ನಳ್ಳಿ, ಬೀದರ್ ತಾಲ್ಲೂಕು ಇವರು ಈ ಹಿಂದೆ ಬೀದರ್‌ನಲ್ಲಿರುವ ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದ್ವಿತೀಯ ಪಿ.ಯು.ಸಿ. 2003ರ ಪಬ್ಲಿಕ್ ಪರೀಕ್ಷೆಗೆ ಬೀದರ್‌ನಲ್ಲಿರುವ ಬಾಲಕರ ಸರ್ಕಾರಿ ಪದವಿಪೂರ್ವ ಕಾಲೇಜು ಪರೀಕ್ಷಾ ಕೇಂದ್ರವಾಗಿದ್ದು, ಈ ಕೇಂದ್ರಕ್ಕೆ ಅದೇ ಕಾಲೇಜಿನ ಪ್ರಾಂಶುಪಾಲರಾಗಿದ್ದ ಶ್ರೀ ಸೈಯದ್ ಖಾಜಿಮ್ ಆಲಿ ಇವರನ್ನು ಪರೀಕ್ಷಾ ಕೇಂದ್ರದ ಮುಖ್ಯ ಅಧೀಕ್ಷಕರನ್ನಾಗಿ ನೇಮಕ ಮಾಡಲಾಗಿದ್ದು, ಸದರಿಯವರು ಪರೀಕ್ಷೆಗೆ ಸಂಬಂಧಿಸಿದ ಪದವಿಪೂರ್ವ ಶಿಕ್ಷಣ ಇಲಾಖೆಯ ಎಲ್ಲಾ ಸೂಚನೆ: ನಿಯಮಗಳನ್ನು ಗಾಳಿಗೆ ತೂರಿ ಮೂಲ ವಿದ್ಯಾರ್ಥಿಗಳ ಬದಲಾಗಿ 5 ನಕಲಿ ವಿದ್ಯಾರ್ಥಿಗಳನ್ನು ಪರೀಕ್ಷೆ ಬರೆಯಲು ಅನುವು ಮಾಡಿಕೊಡುವ ಮೂಲಕ ವಿದ್ಯಾರ್ಥಿಗಳೊಂದಿಗೆ ನೇರವಾಗಿ ಶಾಮೀಲಾಗಿ ಪರೀಕ್ಷಾ ನಿಯಮವನ್ನು ಉಲ್ಲಂಘಿಸಿ ಪರೀಕ್ಷಾ ಕಾರ್ಯಕ್ಕೆ ಚ್ಯುತಿ ತರಲು ಕಾರಣರಾಗಿರುವುದು ಜಾಗೃತ ದಳದ ಅಧಿಕಾರಿಗಳು ಪರೀಕ್ಷೆ ನಡೆಯುತ್ತಿರುವ ಸಂದರ್ಭದಲ್ಲಿ ಭೇಟಿ ನೀಡಿದ ಸಂದರ್ಭದಲ್ಲಿ ಗಮನಕ್ಕೆ ಬಂದು, ಜಾಗೃತ ದಳದ ಅಧಿಕಾರಿಗಳ ತನಿಖಾ ವರದಿಯನ್ನು ಪದವಿಪೂರ್ವ ಶಿಕ್ಷಣ ಇಲಾಖಾ ನಿರ್ದೇಶಕರು ಸರ್ಕಾರಕ್ಕೆ ಒದಗಿಸಿದ್ದು, ಸದರಿ ವರದಿಯಂತೆ ಶ್ರೀ ಸೈಯದ್ ಖಾಜಿಮ್ ಆಲಿ ಇವರು ಆರೋಪ ಎಸಗಿರುವುದು ನಿಜವೆಂದು ಕಂಡುಬಂದ ಹಿನ್ನೆಲೆಯಲ್ಲಿ ಸದರಿಯವರನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 09.07.2004ರ ಆದೇಶದ ಮೂಲಕ ವಿಚಾರಣೆ ಕಾಯ್ದಿರಿಸಿ ಅಮಾನತ್ತಿನಲ್ಲಿಟ್ಟು, ತದನಂತರ ದಿನಾಂಕ: 29.12.2004ರ ಅಧಿಸೂಚನೆಯಲ್ಲಿ ಅಮಾನತ್ತನ್ನು ತೆರವುಗೊಳಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 07.07.2004ರಂದು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ಮೇರೆಗೆ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು. ಆಪಾದಿತರು ದಿನಾಂಕ: 29.10.2004ರಂದು ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ತನ್ನ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದಾರೆ.

ಆಪಾದಿತರ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಹಾಗೂ ದಾಖಲಾತಿಗಳನ್ನು ಪರಿಶೀಲಿಸಿದ ನಂತರ ಪ್ರಕರಣದಲ್ಲಿನ ಸತ್ಯಾಂಶವನ್ನು ತಿಳಿದುಕೊಳ್ಳಲು ವಿವರವಾದ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 194 ಡಿಜಿಡಿ 2003, ಬೆಂಗಳೂರು, ದಿನಾಂಕ: 15ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಸೈಯದ್ ಖಾಜಿಮ್ ಆಲಿ ಪ್ರಾಂಶುಪಾಲರು, ಸರ್ಕಾರಿ ಪದವಿಪೂರ್ವ ಕಾಲೇಜು, ಮುನ್ನಳ್ಳಿ, ಬೀದರ್ ತಾಲ್ಲೂಕು ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11(2) ಮೇರೆಗೆ "ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ" ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5) (ಸಿ) ಮೇರೆಗೆ "ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೀದರ್" ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಪ್ರತಿಯೊಂದು ಆರೋಪಗಳಿಗೆ ಸಿಸಿಎ ನಿಯಮಗಳಡಿ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ ಸಲ್ಲಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು 1,2).

ಪಿ.ಆರ್.144

**ವಿಷಯ :** 2003-04ನೇ ಸಾಲಿಗೆ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ವಿದ್ಯಾ ವಿಕಾಸ ಯೋಜನೆಯಡಿಯಲ್ಲಿ ತಡವಾಗಿ ಸರಬರಾಜು ಮಾಡಿರುವ ಸಮವಸ್ತ್ರಗಳ ಮೌಲ್ಯಕ್ಕೆ ವಿಧಿಸಿರುವ ದಂಡವನ್ನು ಮನ್ನಾ ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಪತ್ರ ಸಂಖ್ಯೆ: ಅ4(1)/ ವಿವಿಯೋ:ಉ.ಸ. 8/2004-05, ದಿನಾಂಕ: 27.10.2004.

**ಪ್ರಸ್ತಾವನೆ:**

2003-04ನೇ ಸಾಲಿನಲ್ಲಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ವಿದ್ಯಾ ವಿಕಾಸ ಯೋಜನೆಯಡಿ ತಡವಾಗಿ ಬಟ್ಟೆಯನ್ನು ಸರಬರಾಜು ಮಾಡಿದ ಕಾರಣಕ್ಕಾಗಿ ನಿಗಮಕ್ಕೆ 1,93,74,622.47 ರೂ.ಗಳ ದಂಡವನ್ನು ವಿಧಿಸಲಾಗಿತ್ತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರು ಮೇಲೆ ಓದಲಾದ ದಿನಾಂಕ: 27.10.2004ರ ತಮ್ಮ ಪತ್ರದಲ್ಲಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು ಆರ್ಥಿಕ ಸಂಕಷ್ಟದಲ್ಲಿದ್ದು, ಇಷ್ಟು ಪ್ರಮಾಣದ ದಂಡವನ್ನು ತಡೆದುಕೊಳ್ಳಲು ಸಾಧ್ಯವಿಲ್ಲದ ಪರಿಸ್ಥಿತಿಯಲ್ಲಿರುವುದರಿಂದ ದಂಡವನ್ನು ಮನ್ನಾ ಮಾಡುವಂತೆ ನಿಗಮದ ನಿರ್ದೇಶಕರು ಕೋರಿದ್ದು, ಈ ಕುರಿತು ಸರ್ಕಾರದಿಂದ ಆದೇಶ ಹೊರಡಿಸಲು ಕೋರಿದ್ದಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 198 ಯೋಯೋಕಾ 2003, ಬೆಂಗಳೂರು, ದಿನಾಂಕ: 17ನೇ ಜನವರಿ, 2005**

**(ಇಡಿ 89 ಸ್ಕೀಮರ (ಯೂನಿಕ್) 2005, ದಿನಾಂಕ: 17ನೇ ಜನವರಿ 2005)**

2003-04ನೇ ಸಾಲಿನಲ್ಲಿ ವಿದ್ಯಾ ವಿಕಾಸ ಯೋಜನೆಯಡಿ ಸಮವಸ್ತ್ರದ ಬಟ್ಟೆಯನ್ನು ತಡವಾಗಿ ಸರಬರಾಜು ಮಾಡಿದ್ದ ಕಾರಣಕ್ಕಾಗಿ ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮಕ್ಕೆ ವಿಧಿಸಲಾಗಿದ್ದ ದಂಡದ ಮೊತ್ತವನ್ನು ರೂ.48 ಲಕ್ಷಗಳೆಂದು ಸರ್ಕಾರವು ನಿಗದಿಪಡಿಸಿದೆ. ಈಗಾಗಲೇ ವಿಧಿಸಲಾಗಿರುವ ದಂಡದಲ್ಲಿ ರೂ.48 ಲಕ್ಷಗಳನ್ನು (ನಲವತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) ಮಾತ್ರ ಹಿಡಿದುಕೊಂಡು ಉಳಿದ ಮೊತ್ತವನ್ನು ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮಕ್ಕೆ ಬಿಡುಗಡೆ ಮಾಡಬೇಕೆಂದು ಆದೇಶಿಸುತ್ತದೆ. ಈ ರೀತಿ ಬಿಡುಗಡೆ ಮಾಡುವಾಗ ನಿಗಮವು ಯಾವುದಾದರೂ ಹಣವನ್ನು ಪಡೆದಿದ್ದಲ್ಲಿ ಸದರೀ ಮೊತ್ತವನ್ನು ಈಗ ಬಿಡುಗಡೆ ಮಾಡುವ ಮೊತ್ತದಿಂದ ಸರಿದೂಗಿಸಿಕೊಳ್ಳತಕ್ಕದ್ದು. ಈ ರಿಯಾಯಿತಿಯನ್ನು ಮುಂದಿನ ವಿಳಂಬಗಳಿಗೆ ಮೇಲ್ಪಂಕ್ತಿಯಾಗಿ ಬಳಸಿಕೊಳ್ಳತಕ್ಕದ್ದಲ್ಲ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2202-02-800-1-05-106 ಅಡಿ ಈ ಕಾರ್ಯಕ್ರಮಕ್ಕೆ ನಿಗದಿಯಾಗಿರುವ ಆಯವ್ಯಯದ ಮಿತಿಯೊಳಗೇ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆಇ 908 ವೆಚ್ಚ-8/2004, ದಿನಾಂಕ: 03.01.2005ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಪಿ.ಆರ್.145

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ),

ಶಿಕ್ಷಣ ಇಲಾಖೆ.

**ವಿಷಯ :** ಶ್ರೀ ಡಿ.ಬಿ. ಕೃಷ್ಣಪ್ಪನವರ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಧಾರವಾಡ ಹಾಗೂ ಶ್ರೀ ಎಸ್.ವಿ. ಕುಲಕರ್ಣಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಧಾರವಾಡ, ಇವರುಗಳ ಮೇಲಿನ ಸರ್ಕಾರಿ ಹಣ ದುರುಪಯೋಗದ ಆರೋಪದ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಅಪರ ಆಯುಕ್ತರ ಕಛೇರಿಯ ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರ ವರದಿ ಸಂಖ್ಯೆ: ಸಿ5.ಪಅದೂರು 11.2004-05 ದಿನಾಂಕ: 06.07.2004.

**ಪ್ರಸ್ತಾವನೆ:**

ಶ್ರೀ ಡಿ.ಬಿ. ಕೃಷ್ಣಪ್ಪನವರ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಧಾರವಾಡ ಹಾಗೂ ಶ್ರೀ ಎಸ್.ವಿ. ಕುಲಕರ್ಣಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಧಾರವಾಡ, ಇವರುಗಳು ರೂ. 4,50,000/-ಗಳನ್ನು ಡ್ರಾ ಮಾಡಿ ದುರುಪಯೋಗಪಡಿಸಿಕೊಂಡಿದ್ದಾರೆಂಬ ದೂರಿನ ಮೇಲೆ ಧಾರವಾಡ ಅಪರ ಆಯುಕ್ತರ ಕಛೇರಿಯ ಸಹನಿರ್ದೇಶಕರು, (ಆಡಳಿತ) ಇವರು ಪೂರ್ವಭಾವಿ ವಿಚಾರಣೆ ನಡೆಸಿ ಧಾರವಾಡದ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರಿಗೆ ಸಲ್ಲಿಸಿದ್ದು, ಅದನ್ನು ಮೇಲೆ ಓದಲಾದ ದಿನಾಂಕ: 06.07.2004ರ ಪತ್ರದ ಮೂಲಕ ಸರ್ಕಾರಕ್ಕೆ ಸಲ್ಲಿಸಿದ್ದಾರೆ. ವರದಿಯಲ್ಲಿ ಕೆಳಕಂಡಂತೆ ಸರ್ಕಾರಿ ಹಣ ದುರುಪಯೋಗ ಪಡಿಸಿಕೊಂಡಿದ್ದಾರೆಂದು ತಿಳಿಸಿದ್ದಾರೆ.

1) ಶಿಕ್ಷಕರ ಕೇಂದ್ರದಲ್ಲಿ 1994-95 ರಿಂದ ಅನುದಾನ ಉಳಿತಾಯದಿಂದ ಸಂಗ್ರಹಿಸಿದ ಮೊತ್ತ ರೂ.5,50,000/-ಗಳನ್ನು ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಧಾರವಾಡ ದಲ್ಲಿ ಎಸ್.ಬಿ. ಖಾತೆ 8332 ರಲ್ಲಿ ಇಡಲಾಗಿತ್ತು.

2) ಸದರಿ ಶಿಕ್ಷಕರು ಕೇಂದ್ರ ಸರ್ಕಾರದಿಂದ ರದ್ದುಗೊಂಡಿದ್ದು, ವ್ಯವಹಾರ ಸ್ಥಗಿತಗೊಳಿಸಲು ಬ್ಯಾಂಕಿಗೆ ಈ ಹಿಂದೆಯೇ ಹಿಂದಿನ ಪ್ರಾಚಾರ್ಯರು ಸೂಚನೆ ನೀಡಿದ್ದರು.

3) ಕಾರಣವಿಲ್ಲದೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಧಾರವಾಡ, ಎಸ್.ಬಿ. ಖಾತೆ ಸಂಖ್ಯೆ: 8332 ದಿಂದ ದೇನಾ ಬ್ಯಾಂಕ್, ಧಾರವಾಡ, ಎಸ್.ಬಿ.ಖಾತೆ ಸಂಖ್ಯೆ: 12568 ದಿಂದ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಖಾತೆ ಸಂಖ್ಯೆ: 1642 ಗೆ ವರ್ಗಾಯಿಸಿರುವರು.

4) ದಿನಾಂಕ: 24.03.2004ರಂದು ರೂ1,00,000/- ದೇನಾ ಬ್ಯಾಂಕಿನಿಂದ ದಿನಾಂಕ: 19.04.2000ರಂದು ರೂ.3,00,000/-ಗಳನ್ನು ಇಂಡಿಯನ್ ಓವರ್‌ಸೀಸ್ ಬ್ಯಾಂಕಿನಿಂದಲೂ ಹಾಗೂ ದಿನಾಂಕ:05.05.2004ರಂದು ರೂ.1,00,000/-ಗಳನ್ನು ಹೀಗೆ ಒಟ್ಟು ರೂ.5,00,000/-ಗಳನ್ನು ಡ್ರಾ ಮಾಡಿದ್ದಾರೆ.

5) ತದನಂತರ ಕೆಳಕಂಡ ದಿನಾಂಕಗಳಲ್ಲಿ ಬ್ಯಾಂಕಿಗೆ ಒಟ್ಟು ರೂ.5,00,000/-ಗಳನ್ನು ಮರಳಿ ತುಂಬಿದ್ದಾರೆ.
ದಿನಾಂಕ: 05.06.2004 ರಂದು 40,000/-
ದಿನಾಂಕ: 08.06.2004 ರಂದು 2,10,000/-
ದಿನಾಂಕ: 08.06.2004 ರಂದು 2,00,000/-
ದಿನಾಂಕ: 17.06.2004 ರಂದು 50,000/-

6) ಇಬ್ಬರು ಅಧಿಕಾರಿಗಳು ಹಣ ತೆಗೆದು ತರಬೇತಿಗಾಗಿ ಖರ್ಚು ಮಾಡಿರುವ ಬಗ್ಗೆ ತಿಳಿಸಿಲ್ಲ. ಹಣ ದುರುಪಯೋಗವಾಗಿದ್ದು, ಮೇಲ್ನೋಟಕ್ಕೆ ಕಂಡುಬಂದಿದೆ.

ಧಾರವಾಡದ ಅಪರ ಆಯುಕ್ತರ ವರದಿಯಲ್ಲಿನ ಅಂಶಗಳನ್ನು ಪರಿಶೀಲಿಸಿದಾಗ ಮೇಲ್ಕಂಡ ಮೊತ್ತವನ್ನು ಡ್ರಾ ಮಾಡಿರುವ ಅಂಶವು ಅಪರ ಆಯುಕ್ತರ ಗಮನಕ್ಕೆ ಬರದೇ ಇದ್ದಲ್ಲಿ ಆ ಹಣವು ಸಂಪೂರ್ಣವಾಗಿ ದುರುಪಯೋಗ ಪಡಿಸಿಕೊಳ್ಳಲಾಗುತ್ತಿತ್ತು. ಈ ಅಧಿಕಾರಿಗಳು ಗ್ರೂಪ್ ಎ ವೃಂದದ ಕಿರಿಯ ಶ್ರೇಣಿ ಅಧಿಕಾರಿಗಳಾಗಿದ್ದು ಸರ್ಕಾರಿ ಹಣ ದುರುಪಯೋಗಪಡಿಸಿಕೊಳ್ಳಲು ನೇರ ಕಾರಣರಾಗಿರುವುದು ಕಂಡುಬಂದಿದ್ದು, ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಳ್ಳುವ ಮೂಲಕ ಶಿಸ್ತು ಕ್ರಮಕ್ಕೆ ಅರ್ಹರಾಗಿದ್ದಾರೆ. ಇವರುಗಳು ಸರ್ಕಾರಿ ಹಣ ದುರುಪಯೋಗಪಡಿಸಿಕೊಳ್ಳಲು ಕಾರಣರಾಗಿರುವುದರಿಂದ, ಅಮಾನತ್ತಿನಲ್ಲಿಡುವುದು ಸೂಕ್ತವೆಂದು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 91 ಡಿಜಿಡಿ 2004, ಬೆಂಗಳೂರು, ದಿನಾಂಕ: 17ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 10ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಶ್ರೀ ಡಿ.ಬಿ. ಕೃಷ್ಣಪ್ಪನವರ ಪ್ರಾಂಶುಪಾಲರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಧಾರವಾಡ ಹಾಗೂ ಶ್ರೀ ಎಸ್.ವಿ. ಕುಲಕರ್ಣಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಧಾರವಾಡ (ಪ್ರಸ್ತುತ ಹಿರಿಯ ಉಪನ್ಯಾಸಕರು, ಡಯಟ್ ಹಾವೇರಿ ಇಲ್ಲಿಗೆ ವರ್ಗಾವಣೆ ಆದೇಶದಲ್ಲಿರುವರು) ಇವರುಗಳನ್ನು, ಇವರುಗಳ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ: ಕ್ರಿಮಿನಲ್ ಕ್ರಮ ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಶ್ರೀ ಡಿ.ಬಿ. ಕೃಷ್ಣಪ್ಪನವರ ಮತ್ತು ಶ್ರೀ ಎಸ್.ವಿ. ಕುಲಕರ್ಣಿ ಇವರುಗಳು ಕೆಸಿಎಸ್‌ಆರ್ ನಿಯಮಾವಳಿಗಳ ಪ್ರಕಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಾಗಿದ್ದಾರೆ.

ಶ್ರೀ ಡಿ.ಬಿ. ಕೃಷ್ಣಪ್ಪನವರ ಮತ್ತು ಶ್ರೀ ಎಸ್.ವಿ. ಕುಲಕರ್ಣಿ ಇವರುಗಳು ಶಿಸ್ತು ಪ್ರಾಧಿಕಾರಿಯಾದ ಸರ್ಕಾರದ ಪೂರ್ವಾನುಮತಿ ಇಲ್ಲದೆ ಕೇಂದ್ರ ಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು 1,2).

ಪಿ.ಆರ್.146

## AGRICULTURE AND HORTICULTURE SECRETARIAT

**Sub:** Pilot Project on Adoption of Israeli Technology in Farmers Fields.

**Preamble:**

Adoption of Israeli Technology in Karnataka on the model of Kuppam in Andhrapradesh had been under examination for quite some time and finally Horticulture Department had prepared a Pilot Project on Adoption of Israeli Technology in farmer's fields. The main objective of the proposal is to popularize by demonstration on the farmers fields, growth of high value vegetable and fruits, which have a scope for increasing the income level of the farmers. A package of technical know-how will be disseminated to them, which will include fertigation, drip irrigation and commercial propagation of Fruits and vegetables, where in conservation of water and management of nutrition to the plants will be given major emphasis. Government has examined the pilot project and hence the following order.

**Government Order No. AHD 101 HPP 2004, Bangalore, Dated: 17th January, 2005**

Government is pleased to permit the Director of Horticulture to implement a Pilot Project on Adoption of Israeli Technology in Farmers Fields in Karnataka at a total cost of Rs. 10.00 crores over a period of 5 years as per the guidelines annexed to this Government Order. Department of Horticulture will be the Nodal Agency for the implementation of the project.

During the year 2004-05 an amount of Rs.5 crores would be met under the Head of Account 2401-00-119-206-000-051-General expenses-"Adoption of Israeli Technology of Backward taluks"

This order issues with the concurrence of the Finance Department vide its Note No. FD 531 Exp4/2005 Dated: 13.01.2005.

By Order and in the Name of the Governor of Karnataka,
**N. MANJULA GEETHA**
Under Secretary to Government,
Agriculture and Horticulture Department.

**(Annexure to the G. O. No. AHD 101 HPP 2004, Bangalore, Dated: 17th January, 2005)**

**GUIDELINES FOR THE PILOT PROJECT ON ADOPTION OF ISRAELI TECHNOLOGY IN FARMERS FIELDS**

1) The project will be implemented on a pilot basis in the farmer's fields over a period fo 5 years.
2) It will be implemented with 100% State Government assistance for a period of 2 years and farmers will have to incur the expenses from their own sources after 2 years.
3) The maximum expenditure will be Rs.50,000 on an average per acre.
4) Private manufacturers of drip equipments will be the implementing agencies at the field level.
5) Marketing of high value vagetables and fruits produced in these fields will be organized by the KAPPEC.
6) Israel Technology will be adopted in 2000 acres belonging to farmers.
For this purpose, 200 acres will be taken up in each of the following 10 Taluks;

| Sl.No. | Location | Total are a (in acres) | Unit cost (in Rupees) | Total cost (in crores) |
|---|---|---|---|---|
| 1. | Jevargi | 200 | 50,000 | 1.00 |
| 2. | Afzalpur | 200 | 50,000 | 1.00 |
| 3. | Chincholi | 200 | 50,000 | 1.00 |
| 4. | Kustagi | 200 | 50,000 | 1.00 |
| 5. | Yalburga | 200 | 50,000 | 1.00 |
| 6. | Athani | 200 | 50,000 | 1.00 |
| 7. | Chamarajanagara | 200 | 50,000 | 1.00 |
| 8. | Bagepalli | 200 | 50,000 | 1.00 |
| 9. | Molakalmuru | 200 | 50,000 | 1.00 |
| 10. | Hagaribommanahalli | 200 | 50,000 | 1.00 |
| | **Total** | **2000** | **----** | **10.00** |

7) Contiguous villages will be taken up, thereby benefiting small and Marginal farmers.
8) This will be a phased programme where integrated production of fruits and vegetables will be taken up with 100% Government assistance. During the 1st year 50% of the selected area (1000 acres) will be developed and during the 2nd year the remaining 50% of the selected area (1000 acres) will be developed. It will entirely be left to the farmers to incur expenditure on inputs on the land from the 2nd year onwards.
9) Integrated and comprehensive development by optimizing production and productivity of Horticultural crops from each selected unit will be achieved by adopting the following;
a. Israeli Technology in Water and Nutrition management.
b. Watershed approach in planning and execution,
c. As commercial venture with regard to cost of production and realization.
10) The maximum expenditure will be Rs.50,000/- on an average per acre. 200 acres will be covered in each of the 10 taluks. In all, 1000 acres will be covered at a cost of Rs.5 crores during the 1st year at the rate of 100 acres per taluk and another 1000 acres will be developed by utilizing 5 crores during the 2nd year. Thus, a total amount of Rs.10.00 crores will be utilised for the project over a period of 2 years.
11) COST PER LOCATION
(A)

| Sl.No. | Particulars | Nos. | Unit Cost (In Rs.) | Total Cost (Rs. in lakhs) |
|---|---|---|---|---|
| 1. | Training | 4 | 25,000 | 1.00 |
| 2. | Plants/ seeds | 200 | 7,500 | 15.00 |
| 3. | Drip system | 200 | 20,000 | 40.00 |
| 4. | Sprayers | 200 | 3,000 | 6.00 |
| 5. | Crates | 2000 | 250 | 5.00 |
| 6. | Fertilizers | 200 | 4,000 | 8.00 |
| 7. | PP Chemicals | 200 | 2,000 | 4.00 |
| 8. | Organic manure | 1000 | 1,500 | 15.00 |
| 9. | Land dev, water storage facility | 200 | 2,250 | 4.50 |
| | **SUB TOTAL** | **(A)** | | **98.50** |

FOR TEN LOCATIONS: Rs.98.50 lakhs X 10=985.00 lakhs.

| | | |
|---|---|---|
| (B) 1. | Salary and Allowances for 4 project officers (on contract) for 2 years. @ Rs.12,500/- per month for each (Rs.50,000 X 24 months) | 12.00 lakhs. |
| 2. | Honorarium for experts @ Rs.20,000/- per location (Ten locations) | 2.00 lakhs. |
| 3. | Unforeaseen expenditure- | 1.00 lakhs |
| | **SUB TOTAL (B)** | **15.00 lakhs** |
| (C) | GRAND TOTAL: (A)+(B)=C Rs.985.00 lakhs + 15.00 lakhs= | **1000.00 lakhs** |

12) Agencies will be fixed for actual implementation of the project at field level by following the procedure. The agencies will be from among the manufacturers of the drip irrigation equipments and they will be in charge of implementation of the project for the period of 5 years.

13) The crops proposed to be grown under the project are Furit crops such as Lime, Pomegranate, Mosambi, Fig, Mango, Sapota, Custard, Apple, and Amla etc. In these crops, vegetables, flowers, Medicinal and Aromatic crops will be grown as intercrops. Vegetable crops like Tomato, Cabbage, Cauliflower, Capsicum, Okra, Gherkin, Beans, Brinjal, Peas, Carrot, Beetroot, Gourds etc shall also be preferred. Seasonal Flowers suitable for local market like marigold, jasmine, crosandra and others will be encouraged.

**N. MANJULA GEETHA**
Under Secretary to Government,
Agriculture and Horticulture Department.

PR-147

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪ ತಹಶೀಲ್ದಾರ್, ಬಿದರಹಳ್ಳಿ ನಾಡಕಛೇರಿ, ಬೆಂಗಳೂರು ದಕ್ಷಿಣ ತಾಲ್ಲೂಕು ಹಾಲಿ ತಹಶೀಲ್ದಾರ್ ದೊಡ್ಡಬಳ್ಳಾಪುರ ತಾಲ್ಲೂಕು ಮತ್ತು ಶ್ರೀ ದಶರಥರಾವ್, ಹಿಂದಿನ ದ್ವಿತೀಯ ದರ್ಜೆ ಸಹಾಯಕ, ನಾಡ ಕಛೇರಿ, ಬಿದರಹಳ್ಳಿ, ಬೆಂಗಳೂರು ದಕ್ಷಿಣ ತಾಲ್ಲೂಕು, ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ :** 1. ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ದಿನಾಂಕ: 08.11.2004ರ ಅ.ಸ.ಪತ್ರ ಸಂಖ್ಯೆ: ಕಾಂಪ್ಟ್: ಉಪಲೋಕ:ಬಿಡಿ 169:94-95.

**ಪ್ರಸ್ತಾವನೆ:**

ಶ್ರೀ ಸಂಪತ್‌ಕುಮಾರ್, ಹಿಂದಿನ ಉಪ ತಹಶೀಲ್ದಾರ್, ಬಿದರಹಳ್ಳಿ ನಾಡಕಛೇರಿ, ಬೆಂಗಳೂರು ದಕ್ಷಿಣ ತಾಲ್ಲೂಕು ಹಾಲಿ ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು ಮತ್ತು ಶ್ರೀ ದಶರಥರಾವ್, ಹಿಂದಿನ ದ್ವಿ.ದ.ಸ., ನಾಡಕಛೇರಿ, ಬಿದರಹಳ್ಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಇವರುಗಳು ಸದರಿ ನಾಡ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಮಂಡೂರು ಗ್ರಾಮದ ಸ.ನಂ.128ರಲ್ಲಿ ಎಂ.ಆರ್. 1:68ನ್ನು ತಿದ್ದಿ ಹೊಸದಾಗಿ ಪಿಳ್ಳಮ್ಮ ಕೋಂ ಚನ್ನರಾಯಪ್ಪ ಎಂಬುವವರ ಹೆಸರಿಗೆ ಫೋರ್ಜರಿ ಖಾತೆಯನ್ನು ಮಾಡಿರುವ ಹಾಗೂ ಬದಲಾವಣೆ ವಹಿ ನಕಲನ್ನು ನೀಡಿರುವ ಆರೋಪವು ಪೂರ್ವಭಾವಿ ತನಿಖೆಯಿಂದ ಸಾಬೀತಾಗಿರುವುದರಿಂದ, ಈ ಮೇಲ್ಕಂಡ ಆಪಾದಿತರೆಂದು ಹೇಳಲಾಗಿರುವ ಅಧಿಕಾರಿ: ನೌಕರರು ಕಠಿಣ ದಂಡನೆಗೆ ಅರ್ಹರಾಗಿರುತ್ತಾರೆಂದು ದಿನಾಂಕ: 05.11.2004ರ ವರದಿಯಲ್ಲಿ ತಿಳಿಸಿರುವ ಗೌರವಾನ್ವಿತ ಲೋಕಾಯುಕ್ತರು ಇವರಿಬ್ಬರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14ಎ ರನ್ವಯ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಶಿಫಾರಸ್ಸು ಮಾಡಿರುವ ವರದಿಯೊಂದಿಗೆ ಕರ್ನಾಟಕ ಲೋಕಾಯುಕ್ತರ ಕಛೇರಿಯ ನಿಬಂಧಕರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸದರಿ ಆರೋಪಿತರಿಬ್ಬರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13 ಮತ್ತು 11ಎ ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಈ ಪ್ರಕರಣವನ್ನು ಅದೇ ನಿಯಮಾವಳಿಗಳ ನಿಯಮ 14ಎ ರಡಿಯಲ್ಲಿ ಗೌರವಾನ್ವಿತ ಉಪ ಲೋಕಾಯುಕ್ತರು ಬೆಂಗಳೂರು ಇವರಿಗೆ ವಹಿಸಲು ಸರ್ಕಾರವು ನಿರ್ಧರಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 78 ಎಡಿಇ 2004, ಬೆಂಗಳೂರು, ದಿನಾಂಕ: 17ನೇ ಜನವರಿ, 2005**

ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 14ಎ ರನ್ವಯ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪ ತಹಶೀಲ್ದಾರ್, ನಾಡ ಕಛೇರಿ, ಬಿದರಹಳ್ಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಹಾಲಿ ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ಶ್ರೀ ದಶರಥರಾವ್, ಹಿಂದಿನ ದ್ವಿ.ದ.ಸ., ನಾಡಕಛೇರಿ, ಬಿದರಹಳ್ಳಿ ಬೆಂಗಳೂರು ದಕ್ಷಿಣ ತಾಲ್ಲೂಕು ಇವರುಗಳ ವಿರುದ್ಧ ಅದೇ ನಿಯಮಾವಳಿಗಳ ನಿಯಮ 13 ಮತ್ತು 11ಎ ರನ್ವಯ ಜಂಟಿ ಇಲಾಖಾ ವಿಚಾರಣೆ ಜರುಗಿಸಿ ವರದಿ ನೀಡಲು ಈ ಪ್ರಕರಣವನ್ನು ಗೌರವಾನ್ವಿತ ಉಪ ಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮಹಂತೇಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

ಪಿ.ಆರ್.148

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಅರ್ಪಣ ಎಂ. ಈರಣ್ಣ, ಗ್ರಾಮೀಣ ಅಭ್ಯರ್ಥಿಯಲ್ಲದ ಇವರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003 ದಿನಾಂಕ: 20.12.2003.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003 ದಿನಾಂಕ: 30.12.2003.
3. ನಿರ್ದೇಶಕರು, ಹಾಗೂ ಅಧ್ಯಕ್ಷರು, ಇಲಾಖಾ ನೇಮಕಾತಿ ಸಮಿತಿ, ಆಕುಕ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಆರ್‌ಸಿ/ 42(1)/ 98-99 ದಿನಾಂಕ: 31.12.2003.

**ಪ್ರಸ್ತಾವನೆ:**

ಗ್ರಾಮೀಣ ಕೃಪಾಂಕ ಸೌಲಭ್ಯದ ಆಧಾರದ ಮೇಲೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಗೆ ನೇಮಕಾತಿ ಮಾಡಲಾಗಿದ್ದುದರ ಬಗ್ಗೆ ಘನ ಸರ್ವೋಚ್ಚ ನ್ಯಾಯಾಲಯವು ನೀಡಿದ ಆದೇಶದನ್ವಯ ಸದರಿ ನೇಮಕಾತಿ ಪ್ರಕ್ರಿಯೆಯನ್ನು ಪರಿಷ್ಕರಿಸಿ, ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ಆಯ್ಕೆಪಟ್ಟಿಯನ್ನು ತಯಾರಿಸಲಾಯಿತು. ಅದರಂತೆ ಸದರಿ ಪರಿಷ್ಕೃತ ಆಯ್ಕೆಪಟ್ಟಿಯಲ್ಲಿ ಆಯ್ಕೆಗೊಳ್ಳದ ಅಭ್ಯರ್ಥಿಗಳನ್ನು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶದಲ್ಲಿ ಸೇವೆಯಿಂದ ವಿಮೋಚನೆಗೊಳಿಸಲಾಗಿರುತ್ತದೆ. ತದನಂತರ ಕ್ರಮಾಂಕ (2) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಅಭ್ಯರ್ಥಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲಾಗಿರುತ್ತದೆ. ಈ ಪರಿಷ್ಕೃತ ಪಟ್ಟಿಯಲ್ಲಿ ಡಾ: ಅರ್ಪಣ ಎಂ. ಈರಣ್ಣ ಇವರನ್ನು ಗ್ರಾಮೀಣ ಕೃಪಾಂಕ ಸೌಲಭ್ಯ ಪಡೆದ ಅಭ್ಯರ್ಥಿಯೆಂದು ತಪ್ಪಾಗಿ ಗ್ರಹಿಸಿ, ಸೇವೆಯಿಂದ ವಿಮೋಚನೆಗೊಳಿಸಲಾಗಿರುತ್ತದೆ. ಆದರೆ ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಆಯುಕ್ತರ ಪತ್ರದಲ್ಲಿ ಪರಿಷ್ಕೃತ ಆಯ್ಕೆಪಟ್ಟಿಗೆ ಕೆಲವು ತಿದ್ದುಪಡಿಗಳಿಗೆ ಸಂಬಂಧಿಸಿದಂತೆ ವಿವರಣೆಗಳನ್ನು ನೀಡುತ್ತಾ ಡಾ: ಅರ್ಪಣ ಎಂ. ಈರಣ್ಣ ಇವರು ಗ್ರಾಮೀಣ ಅಭ್ಯರ್ಥಿ ಅಲ್ಲವಾಗಿದ್ದರೂ ಸಹ ಸೇವೆಯಿಂದ ತೆಗೆದುಹಾಕಲಾಗಿದ್ದು ಡಾ: ಕವಿತಾ ಎನ್. ಇವರ ಅನರ್ಹತೆಯಿಂದಾಗಿ III (ಬಿ) ಮಹಿಳಾ ಪ್ರವರ್ಗದಲ್ಲಿ ಆಯ್ಕೆಗೆ ಪರಿಗಣಿಸಲಾಗಿರುವುದರಿಂದ ಇವರನ್ನು ಪುನಃ ಕರ್ತವ್ಯಕ್ಕೆ ಸೇರಿಸಿಕೊಳ್ಳಬೇಕಾಗಿರುತ್ತದೆ ಎಂದು ಪ್ರಸ್ತಾಪಿಸಲಾಗಿರುತ್ತದೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 472 ಹೆಚ್‌ಎಸ್‌ಹೆಚ್ 2003, ಬೆಂಗಳೂರು, ದಿನಾಂಕ: 13ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಡಾ: ಅರ್ಪಣ ಎಂ. ಈರಣ್ಣ, ಸಮುದಾಯ ಆರೋಗ್ಯ ಕೇಂದ್ರ, ಹುಲಸೂರು, ಬಸವಕಲ್ಯಾಣ ತಾಲ್ಲೂಕು, ಬೀದರ್ ಜಿಲ್ಲೆ, ಇವರನ್ನು ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ಆಯ್ಕೆಪಟ್ಟಿಯಲ್ಲಿ III (ಬಿ) ಮಹಿಳಾ ಪ್ರವರ್ಗದ ಅಡಿಯಲ್ಲಿ ಆಯ್ಕೆಗೆ ಪರಿಗಣಿಸಿ ದಿನಾಂಕ: 20.12.2003ರ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003 ರಲ್ಲಿ ಸೇವೆಯಿಂದ ವಿಮೋಚನೆಗೊಳಿಸಲಾದ ಆದೇಶವನ್ನು ಹಿಂದಕ್ಕೆ ಪಡೆದು, ಸದರಿ ದಿನಾಂಕದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ವೇತನ ಶ್ರೇಣಿ ರೂ.7400-200-8800-260-10880-320-13120ರಲ್ಲಿ ಸೇವೆಯಲ್ಲಿ ಮುಂದುವರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಜಗದೀಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.149

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಬಿ. ಶ್ರೀನಿವಾಸ, ನಿವೃತ್ತ ಇಂಜಿನಿಯರ್-ಇನ್-ಚೀಫ್ ಹಾಗೂ ಇತರೆ 15 ಜನ ಅಧಿಕಾರಿ/ ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ನೋಟೀಸ್ ಸಂಖ್ಯೆ: ಸಿಆಸುಇ 84 ಎಸ್‌ಇಎನ್ 2000, ದಿನಾಂಕ: 30.09.2000 ಹಾಗೂ 30.10.2000.
2. ಶ್ರೀ ಬಿ. ಶ್ರೀನಿವಾಸ, ಇಂಜಿನಿಯರ್-ಇನ್-ಚೀಫ್, ನಿವೃತ್ತ ರವರ ದಿನಾಂಕ: 03.11.2000ರ ಉತ್ತರ.
3. ಶ್ರೀ ಎಂ. ತ್ಯಾಗರಾಜ, ಸಹಾಯಕ ನಿಯಂತ್ರಕರು (ದಿನಾಂಕ: 17.02.2001), ಶ್ರೀ ಚನ್ನಕೇಶವೇಗೌಡ, ಲೆಕ್ಕಪತ್ರ ಅಧೀಕ್ಷಕರು, (ದಿನಾಂಕ: 02.03.2001), ಶ್ರೀ ಬಿ. ಶಿವಣ್ಣ ಲೆಕ್ಕಾಧಿಕಾರಿ, (ದಿನಾಂಕ: 17.02.2001), ಶ್ರೀ ಎಂ. ಕೃಷ್ಣಪ್ಪ, ಲೆಕ್ಕ ಪರಿಶೋಧನಾಧಿಕಾರಿ, (ದಿನಾಂಕ: 08.12.2000), ಶ್ರೀ ಎಸ್.ಸಿ. ನಾರಾಯಣ ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕರು, (ದಿನಾಂಕ: 11.12.2000) ರವರುಗಳ ಉತ್ತರಗಳು.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 84 ಎಸ್‌ಇಎನ್ 2000, ದಿನಾಂಕ: 21.02.2004 ಮತ್ತು 23.02.2004.
5. ವಿಚಾರಣಾಧಿಕಾರಿಗಳ ದಿನಾಂಕ: 04.11.2004ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಬಿ. ಶ್ರೀನಿವಾಸರವರು ಬೆಂಗಳೂರು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ, 1995-96ನೇ ಸಾಲಿನಲ್ಲಿ ಕಾರ್ಯಪಾಲಕ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ಕೇಂದ್ರ ಪುರಸ್ಕೃತ ನೀರು ಸರಬರಾಜು ಯೋಜನೆಯ ಅನುದಾನ ರೂ.52,89,740/- ಮೊತ್ತವನ್ನು ಸರ್ಕಾರದ ಅಥವಾ ಜಿಲ್ಲಾ ಪಂಚಾಯತಿಯ ಪೂರ್ವ ಅನುಮೋದನೆಯನ್ನು ಪಡೆಯದೆ ರಾಜ್ಯ ವಲಯದ ನೀರು ಪೂರೈಕೆ ಯೋಜನೆ ಮತ್ತು ದಾಸ್ತಾನು ಖರೀದಿಗೂ ಬೇರೆ ಬೇರೆ ಲೆಕ್ಕಶೀರ್ಷಿಕೆಯಡಿಯಲ್ಲಿ ವೆಚ್ಚ ಮಾಡಿ ಸರ್ಕಾರದಿಂದ ನೀಡಲಾದ ಸೂಚನೆಗಳನ್ನು ಉಲ್ಲಂಘಿಸುವ ಮೂಲಕ ಕರ್ನಾಟಕ ಆರ್ಥಿಕ ಸಂಹಿತೆಯನ್ನು ಉಲ್ಲಂಘಿಸಿ ದುರ್ನಡತೆ ಎಸಗಿದ ಆರೋಪಕ್ಕಾಗಿ ಶ್ರೀ ಬಿ. ಶ್ರೀನಿವಾಸ, ನಿವೃತ್ತ ಇಂಜಿನಿಯರ್-ಇನ್-ಚೀಫ್, ಶ್ರೀ ವಿಶ್ವನಾಥಗೌಡ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ಬಿ. ಶಿವಣ್ಣ, ನಿವೃತ್ತ ಲೆಕ್ಕಾಧಿಕಾರಿ, ರಾಜ್ಯ ಲೆಕ್ಕಪತ್ರ ಇಲಾಖೆ ಹಾಗೂ (1) ಎಂ. ತ್ಯಾಗರಾಜ್, ಸಹಾಯಕ ನಿಯಂತ್ರಕರು, (2) ಚನ್ನಕೇಶವೇಗೌಡ, ಲೆಕ್ಕಪತ್ರ ಅಧೀಕ್ಷಕರು, (3) ಎಂ. ಕೃಷ್ಣಪ್ಪ, ಲೆಕ್ಕ ಪರಿಶೋಧನಾಧಿಕಾರಿ, (4) ನಾರಾಯಣಪ್ಪ, ಲೆಕ್ಕಪತ್ರ ಅಧೀಕ್ಷಕರು, (5) ಬಿ. ಚಿಕ್ಕ ತಿಮ್ಮಯ್ಯ, ಲೆಕ್ಕ ಪರಿಶೋಧನಾಧಿಕಾರಿ, (6) ಎಸ್.ಸಿ. ನಾರಾಯಣ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ, (7) ಲಕ್ಕಪ್ಪ, ಲೆಕ್ಕ ಪರಿಶೋಧನಾಧಿಕಾರಿ, (8) ಎಂ. ಗಿರಿಗೌಡ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ (9) ಸಿ.ಎಲ್. ನಾರಾಯಣ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ, (10) ಎನ್.ವಿ. ಮೃತ್ಯುಂಜಯ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ, (11) ಹೆಚ್.ಎಂ. ಮಂಜುನಾಥ, ದ್ವಿತೀಯ ದರ್ಜೆ ಸಹಾಯಕ, (12) ಎನ್. ಶ್ರೀನಿವಾಸಯ್ಯ, ದ್ವಿತೀಯ ದರ್ಜೆ ಸಹಾಯಕ, (13) ಬೈರಪ್ಪ, ದ್ವಿತೀಯ ದರ್ಜೆ ಸಹಾಯಕರವರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 30.10.2000ದ ನೋಟೀಸ್ ಜಾರಿ ಮಾಡುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು

ಪ್ರಾರಂಭಿಸಲಾಯಿತು. ಸೇವೆಯಿಂದ ವಯೋನಿವೃತ್ತಿ ಹೊಂದಿದ ಶ್ರೀ ಬಿ. ಶ್ರೀನಿವಾಸ್ ಅವರು ದಿನಾಂಕ: 30.09.2000ದ ನೋಟೀಸಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 03.11.2000ದ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಶ್ರೀ ವಿಶ್ವನಾಥಗೌಡ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ರಾಜ್ಯಲೆಕ್ಕಪತ್ರ ಇಲಾಖೆ ಅವರು 30.10.2000ದ ನೋಟೀಸ್‌ಗೆ ಉತ್ತರಿಸಿಲ್ಲ ಹಾಗೂ ಉಳಿದ ಆರೋಪಿ ಅಧಿಕಾರಿ/ ನೌಕರರು ಮೇಲೆ (3) ರಲ್ಲಿ ಓದಲಾದ ವಿವಿಧ ದಿನಾಂಕಗಳ ಉತ್ತರ ಸಲ್ಲಿಸಿ ಆರೋಪಗಳನ್ನು ನಿರಾಕರಿಸಿದ್ದಾರೆ.

ಆರೋಪಿತ ಅಧಿಕಾರಿ/ ನೌಕರರ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣಿಸುವ ರೀತಿಯಲ್ಲಿಲ್ಲದಿರುವುದರಿಂದ, ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ: 23.02.2004ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳ ಮೇಲೆ (5)ರಲ್ಲಿ ಓದಲಾದ ದಿನಾಂಕ: 04.11.2004ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಆರೋಪಿತ ಅಧಿಕಾರಿಗಳಾದ ಶ್ರೀ ಬಿ. ಶ್ರೀನಿವಾಸ್‌ರವರು ಅನುದಾನವನ್ನು ವಿಚಲನೆ ಮಾಡಿ ಖರ್ಚು ಮಾಡಿ ನಿಯಮಾವಳಿಗಳನ್ನು ಉಲ್ಲಂಘಿಸಿಲ್ಲವೆಂದು ಹಾಗೂ ಉಳಿದ 15 ಅಧಿಕಾರಿ/ ನೌಕರರುಗಳ ಮೇಲೆ ಮಾಡಿರುವ ಆಪಾದನೆಗಳು ಸಮಂಜಸವಾದ ಮತ್ತು ಒಪ್ಪುವಂತ ಸಾಕ್ಷ್ಯಾಧಾರಗಳಿಂದ ರುಜುವಾತಾಗಿಲ್ಲವೆಂದು ತೀರ್ಮಾನಿಸಿ, ಆಪಾದಿತ ಅಧಿಕಾರಿ/ ನೌಕರರುಗಳು ತಪ್ಪು ಮಾಡಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಗಣನೆಗೆ ತೆಗೆದುಕೊಂಡು ಲೋಕೋಪಯೋಗಿ ಇಲಾಖೆಯ ಅಭಿಪ್ರಾಯವನ್ನು ಪರಿಗಣಿಸಿ ಪ್ರಕರಣದಲ್ಲಿ ಇವರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗದೇ ಇರುವುದರಿಂದ ಮತ್ತು ಕಾಮಗಾರಿಗಳ ಬಗ್ಗೆ ಅಕ್ರಮದ ದೂರುಗಳು ಇಲ್ಲದೇ ಇರುವುದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 84 ಎಸ್‌ಇಎನ್ 2000, ಬೆಂಗಳೂರು, ದಿನಾಂಕ: 15ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಹಾಲಿ ನಿವೃತ್ತರಾಗಿರುವ ಶ್ರೀ ಬಿ. ಶ್ರೀನಿವಾಸ್, ನಿವೃತ್ತ ಮುಖ್ಯ ಇಂಜಿನಿಯರ್, ಶ್ರೀ ವಿಶ್ವನಾಥಗೌಡ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಮತ್ತು ಶ್ರೀ ಶಿವಣ್ಣ ನಿವೃತ್ತ ಲೆಕ್ಕಾಧಿಕಾರಿ ಹಾಗೂ ಹಾಲಿ ಕಾರ್ಯನಿರ್ವಹಿಸುತ್ತಿರುವ,

1) ಎಂ. ತ್ಯಾಗರಾಜ್, ಸಹಾಯಕ ನಿಯಂತ್ರಕರು.
2) ಚನ್ನಕೇಶವೇಗೌಡ, ಲೆಕ್ಕಪತ್ರ ಅಧೀಕ್ಷಕರು.
3) ಎಂ. ಕೃಷ್ಣಪ್ಪ, ಲೆಕ್ಕ ಪರಿಶೋಧನಾಧಿಕಾರಿ.
4) ಸಿ. ನಾರಾಯಣಪ್ಪ, ಲೆಕ್ಕಪತ್ರ ಅಧೀಕ್ಷಕರು.
5) ಬಿ. ಚಿಕ್ಕ ತಿಮ್ಮಯ್ಯ, ಲೆಕ್ಕಪರಿಶೋಧನಾಧಿಕಾರಿ.
6) ಎಸ್.ಸಿ. ನಾರಾಯಣ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ.
7) ಲಕ್ಕಪ್ಪ, ಲೆಕ್ಕಪರಿಶೋಧನಾಧಿಕಾರಿ.
8) ಎಂ. ಗಿರಿಗೌಡ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ.
9) ಸಿ.ಎಲ್. ನಾರಾಯಣ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ.
10) ಎನ್.ವಿ. ಮೃತ್ಯುಂಜಯ, ಪ್ರಥಮ ದರ್ಜೆ ಲೆಕ್ಕಪತ್ರ ಸಹಾಯಕ.
11) ಹೆಚ್.ಎಂ. ಮಂಜುನಾಥ, ದ್ವಿತೀಯ ದರ್ಜೆ ಸಹಾಯಕ.
12) ಎಸ್. ಶ್ರೀನಿವಾಸಯ್ಯ, ದ್ವಿತೀಯ ದರ್ಜೆ ಸಹಾಯಕ.
13) ಭೈರಪ್ಪ, ದ್ವಿತೀಯ ದರ್ಜೆ ಸಹಾಯಕ.

ಇವರುಗಳ ವಿರುದ್ಧ ಮಾಡಲಾದ ದೋಷಾರೋಪಣೆಗಳಿಂದ ಸದರಿಯವರುಗಳನ್ನು ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶಿಸಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಆರೋಪಿತ ಅಧಿಕಾರಿ ನೌಕರರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್.150

**ವಿಷಯ :** ಕಾನೂನು ಇಲಾಖೆಯ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆ ಎಂದು ನಿರ್ಮಿಕರಿಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಸಿಆಸುಇ 366 ಸಅಸೇ 2004, ದಿನಾಂಕ: 14.12.2004.
2. ರಿಜಿಸ್ಟ್ರಾರ್ ಜನರಲ್ ರವರ ಪತ್ರ ಸಂಖ್ಯೆ: ಜಿಓಬಿ (1) 1 2005, ದಿನಾಂಕ: 12.01.2005.
3. ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಲಾ 15 ಕಾ 2005, ದಿನಾಂಕ: 12.01.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಡಿಸೋಜಾ ರಾಬಿನ್‌ಸನ್, ಸರ್ಕಾರದ ವಿಶೇಷ ಕಾರ್ಯದರ್ಶಿ, ಕಾನೂನು ಇಲಾಖೆ ರವರನ್ನು ಶ್ರೀ ಜವಾದ ರಹೀಂ ರವರ ವರ್ಗಾವಣೆಯಿಂದ ತೆರವಾದ ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ಕ.ನಾ.ಸೇ. (ಸಾ.ನೇ) ನಿಯಮಗಳ ನಿಯಮ 16(ಎ) (11) ಅನ್ವಯ ವರ್ಗಾಯಿಸಿ ನೇಮಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್ ರವರು ಉಚ್ಚ ನ್ಯಾಯಾಲಯದ ಅಧಿಸೂಚನೆ ಪ್ರತಿಯನ್ನು ಕಳುಹಿಸಿ ಪ್ರಸ್ತುತ ಮುಖ್ಯ ನ್ಯಾಯಾಧೀಶರ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಹಾಗೂ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಮೂಸೆ ಕುನ್ನಿ ನಾಯರ್ ಮೂಲೆ ರವರನ್ನು ಸರ್ಕಾರದ ಅಪರ ಕಾರ್ಯದರ್ಶಿ, ಕಾನೂನು ಇಲಾಖೆ ಇಲ್ಲಿಗೆ ನೇಮಿಸಲು ಪ್ರಸ್ತಾವನೆ ಕಳುಹಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ ರವರು ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಪ್ರಸ್ತುತ ಖಾಲಿ ಇರುವ ಸರ್ಕಾರದ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಅಪರ ಕಾರ್ಯದರ್ಶಿ ಹುದ್ದೆಗೆ ನಿಮ್ನೀಕರಿಸಿ ಸದರಿ ಹುದ್ದೆಯಲ್ಲಿ ಶ್ರೀ ಮೂಸೆ ಕುನ್ನಿ ನಾಯರ್ ಮೂಲೆ, ಜಿಲ್ಲಾ ನ್ಯಾಯಾಧೀಶರು ರವರನ್ನು ನೇಮಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸಅಸೇ 2005 (1), ಬೆಂಗಳೂರು, ದಿನಾಂಕ: 17ನೇ ಜನವರಿ, 2005**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಕಾನೂನು ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಸರ್ಕಾರದ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2).

ಪಿ.ಆರ್.151

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದಲ್ಲಿನ ತಾತ್ಕಾಲಿಕ ಹುದ್ದೆಗಳ ಮುಂದುವರಿಕೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 320 ಎಸ್‌ಜಿಬಿ 85 ದಿನಾಂಕ: 04.12.1985.
2. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 178 ಎಸ್‌ಜಿಬಿ 86, ದಿನಾಂಕ: 26.11.1986.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 5 ಸಸಿವಿ 94 ದಿನಾಂಕ: 14.07.1994.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 95 ದಿನಾಂಕ: 14.07.1995.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸಸಿವಿ 99 ದಿನಾಂಕ: 05.06.2002.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 569 ಸಿಶಾಸೇ 92 ದಿನಾಂಕ: 30.11.1992.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 433 ಸಿಶಾಸೇ 94 ದಿನಾಂಕ: 03.12.1994.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸಸಿವಿ 99 ದಿನಾಂಕ: 24.07.2002.
9. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 2003 ದಿನಾಂಕ: 09.04.2003.
10. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 2003 ದಿನಾಂಕ: 20.11.2003.
11. ಅನಧಿಕೃತ ಟಿಪ್ಪಣಿ ಸಂಖ್ಯೆ: ಜಸಂಇ 110 ಸಿಎಎಂ 2004, ದಿನಾಂಕ: 12.08.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿನ ಸರ್ಕಾರದ ಆದೇಶದಲ್ಲಿ ಸಚಿವಾಲಯದ ಲೋಕೋಪಯೋಗಿ ಮತ್ತು ವಿದ್ಯುಚ್ಛಕ್ತಿ ಇಲಾಖೆಯ ಕಾಡಾ ವಿಭಾಗದಲ್ಲಿ ಈ ಕೆಳಕಂಡ ಹೆಚ್ಚುವರಿ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲಾಗಿತ್ತು.

| | | |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | ಒಂದು ಹುದ್ದೆ |
| 2. | ಸಹಾಯಕ ಸಾಂಖ್ಯಿಕ ಅಧಿಕಾರಿ | ಒಂದು ಹುದ್ದೆ |
| 3. | ಸಹಾಯಕ | ಒಂದು ಹುದ್ದೆ |
| 4. | ಬೆರಳಚ್ಚುಗಾರ | ಒಂದು ಹುದ್ದೆ |
| | **ಒಟ್ಟು** | **ನಾಲ್ಕು ಹುದ್ದೆಗಳು** |

ಮೇಲ್ಕಂಡ ಹುದ್ದೆಗಳನ್ನು ಕಾಲಾನುಕಾಲಕ್ಕೆ ಮುಂದುವರೆಸುತ್ತಾ, ಕ್ರಮ ಸಂಖ್ಯೆ (5) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 31.12.2002ರವರೆಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (6) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.04.1992 ರಿಂದ 2 ವರ್ಷಗಳ ಅವಧಿಗೆ ಹಾಗೂ ಕ್ರಮ ಸಂಖ್ಯೆ (7)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 01.04.1994 ರಿಂದ ದಿನಾಂಕ: 31.03.1995 ರವರೆಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಶಾಖಾಧಿಕಾರಿ | 1 ಹುದ್ದೆ |
| 2. | ಹಿರಿಯ ಸಹಾಯಕ | 1 ಹುದ್ದೆ |
| 3. | ಶೀಘ್ರಲಿಪಿಗಾರ | 1 ಹುದ್ದೆ |
| 4. | ಕಿರಿಯ ಸಹಾಯಕ | 1 ಹುದ್ದೆ |
| 5. | ಬೆರಳಚ್ಚುಗಾರ | 1 ಹುದ್ದೆ |
| 6. | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **7 ಹುದ್ದೆಗಳು** |

ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ಕ್ರಮ ಸಂಖ್ಯೆ: (10)ರಲ್ಲಿರುವ ಸರ್ಕಾರದ ಆದೇಶದಲ್ಲಿ ದಿನಾಂಕ: 31.12.2004ರವರೆಗೆ ಮುಂದುವರೆಸಲಾಗಿರುತ್ತದೆ.

ಸದರಿ ಹುದ್ದೆಗಳನ್ನು ಖಾಯಂಗೊಳಿಸಲು ಕ್ರಮ ಸಂಖ್ಯೆ (11)ರಲ್ಲಿರುವ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆಯು ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 60 ಸಸಿವಿ 2004, ಬೆಂಗಳೂರು, ದಿನಾಂಕ: 14ನೇ ಜನವರಿ, 2005**

ಜಲಸಂಪನ್ಮೂಲ ಇಲಾಖೆಯ ಕಾಡಾ ವಿಭಾಗದ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.01.2005ರಿಂದ ದಿನಾಂಕ: 31.12.2005 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 2. | ಸಹಾಯಕ ಸಾಂಖ್ಯಿಕ ಅಧಿಕಾರಿ | 1 |
| 3. | ಸಹಾಯಕ | 1 |
| 4. | ಬೆರಳಚ್ಚುಗಾರ | 1 |
| 5. | ಶಾಖಾಧಿಕಾರಿ | 1 |
| 6. | ಹಿರಿಯ ಸಹಾಯಕ | 1 |
| 7. | ಶೀಘ್ರಲಿಪಿಗಾರ | 1 |
| 8. | ಕಿರಿಯ ಸಹಾಯಕ | 1 |
| 9. | ಬೆರಳಚ್ಚುಗಾರ | 1 |
| 10. | ದಲಾಯತ್ | 2 |
| | **ಒಟ್ಟು** | **11 ಹುದ್ದೆಗಳು** |

ಸದರಿ ಸರ್ಕಾರಿ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ನೀಡಿರುವ ಸಹಮತಿ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2).

ಪಿ.ಆರ್.152

## FINANCE SECRETARIAT

**Sub:** Conversion of Non-Banking Sub-Treasuries into Banking Sub-Treasuries.

**Read :** 1. Letter No.Khani: Prakriya: 5:2002-03, dated:17-11-04 from the Director of Treasuries, Bangalore.

**Preamble:**

The Director of Treasuries in his letter read above has stated that the State Bank of Mysore, Bangalore vide letter No.FA/SGAC/Govt/293, dated:30-9-04 has agreed for taking over the Government Transactions of Bantwal, Sub-Treasury, Dakshina Kannada District and Reserve Bank of India, Bangalore vide letter No.PAD(BG) 4686/01-02-02/2004-05, dated:9-11-04 has informed that the State Bank of Mysore has agreed to take over the cash transaction of the Bantwal Sub-Treasury. Further Reserve Bank of India has asked the State Government to follow up this matter directly with the State Bank of Mysore for taking further necessary action. The Director of Treasuries, Bangalore has therefore requested for the orders of the Government to transfer the Government cash Transactions of Bantwal, Sub-Treasury to the State Bank of Mysore, B.C.Road Branch, Bantwal. This proposal has been examined by Government in detail. Hence the following order.

**Government Order No. FD 92 AAKHAYI 2002, BANGALORE, DATED: 11th January 2005**

Sanction is hereby accorded to the conversion of the Bantwal Sub-Treasury in Dakshina Kannada District into Banking Treasury with cheque system and to transfer cash transactions of the Sub-Treasury to the State Bank of Mysore, B.C.Road Branch, Bantwal. The actual date of transfer of cash work to the Bank will be notified by the District Treasury officer, Dakshina kannada in consultation with the Bank authorities and the said date will hereafter be referred to as the 'appointed date'.

The special steps to be taken on the eve of conversion of the said Sub-Treasury into Banking Treasury and the classes of cash transactions to be taken over by the bank are detailed in Annexure ' A ' to this order.

On and from the 'appointed date' the branch of the Agency Bank will conduct the cash business of Sub-Treasury and render daily Accounts to the Sub-Treasury Officer Bantwal in the manner laid down in the rules in the Karnataka Treasury code and in the compilation of the Central Treasury rules.

For the conduct of transaction that will continue to be handled at the Sub-Treasury a cash imprest of Rs.200/- (Rs.Two Hundred only) is sanctioned to the Sub-Treasury. The amount may be drawn by the Sub-Treasury Officer, Bantwal from the Bank on a simple receipt. The expenditure out of the imprest should be recouped daily, the connected receipts if any being remitted to the bank and the amount paid being drawn from the Bank separately for each class of transaction. Should a demand be presented at

the Sub-Treasury which cannot be met out of the balance of the cash imprest, the Sub-Treasury Officer Bantwal Treasury may draw the extra amount required from the bank on the payee's receipt indicating the purpose for which money is required and furnishing a pay order thereon.

The normal cash balance fixed for the Sub-Treasury should be treated as withdrawn with effect from the appointed date, and the normal balance fixed for the respective District as a whole reduced correspondingly. The currency chest maintained at the Sub-Treasury shall be closed down and transfered to the bank in consultation with and as per the directions of the Reserve Bank of India.

The District and Sub-Treasury Officers should follow strictly any instructions that the Accountant General in Karnataka, Bangalore may issue in the matter.

The Police guards required for the Bank shall be provided by the Director General and Inspector General of Police in Karnataka, Bangalore under usual terms.

The District Treasury Officer, Dakshina Kannada is requested to make adequate arrangements to effect the transfer on the appointed date under report to Government in the Finance Department as well as to the Director of Treasuries. He is also requested to see that the changes are effected smoothly and maximum convenience and guidance are afforded to other departments and the General Public in the first few days to obviate inconvenience to them.

The District Treasury Officer, Dakshina Kannada is also requested to depute an experienced official in Banking Treasury work to the Sub-Treasury for about a week to enable the staff to become familiar with the new arrangements.

New forms and Registers required at the Sub-Treasury for immediate use should be spared from the District Treasury and an indent placed with the Director, Government Printing and Stationery for future supply.

By Order and in the name of the Governor of Karnataka,

**N. PRABHAKAR**

Under Secretary to Government,

Finance Department (Admn & Adv.).

**ANNEXURE-A**

1. The Cash Balance of the Sub-Treasury on the opening of the 'appointed date' should be remitted to the Bank on the same day upon a separate challan for credit to the head "Local Cash remittances" under advice to the Government in the Finance Department and the Accountant General.

2. The cash transactions connected with the following items of work will be conducted at the Sub-treasury itself as heretofore. The remitters of money or the payees, as the case may be, need not in such cases go to the Bank for their transactions:-

(a) Disbursement of Indian Military Pensions (on muster rolls)

(b) Transactions on account of receipts and payment under Savings Bank.

(c) Any other items of work to be specified by Government.

**N.B.** The amounts collected at the Sub-treasury should be remitted to the Bank daily under challans indicating the Head of account. Separate challans should be used for different major heads. Amounts disbursed from the permanent advance should be recouped from the Bank daily on simple payees' receipts furnishing classification similarly.

Amounts required for disbursement in excess of the balance of the permanent advance should be drawn from the Bank on simple payees' receipts, furnishing the heads of classification in the same way.

3. Pensioners will be paid their pension at the Bank on Cheques issued by the Sub-treasury Officer.

4. Taxes and fees on motor vehicles hitherto collected at the treasury will on and after the 'appointed date' be collected at the Bank direct. The licenses, etc., will be issued by the authorities concerned as usual on surrender of the challan receipted by the Bank and after verification of the credit for the taxes or fees paid in the Treasury Accounts.

5. General, Court fee, Postal and other Stamps including Postal Stationery will be issued at the treasury itself even after the 'appointed date'.

6. Cases, where remittances into and drawal from the Bank may be arranged directly without obtaining an authorization from the Treasury Officer are specified in Annexure 'B'. In other case, the documents on which money is presented or payment claimed at the Bank should have the authorisation of the Sub-Treasury officer. The challans or bills so authorised, if not presented to the Bank within ten days of their authorization require revalidation by the Treasury Officer.

7. The prescribed form of challan alone should be used for all remittances into the Bank. The forms will be supplied by the departmental officers / Sub-Treasury.

8. Cheques on Banks received by Government Officers in payment of Central or State Government dues or in settlement of transactions should be remitted to the Bank direct. Such cheques should be endorsed in favour of the Bank in all cases. Form K.F.C. 2 (Bank) itself may be used as challan in such cases. Pending realisation of the amounts thereof a receipt or token for the cheque only will be given by the Bank in the first instance. The final receipt will be delivered to the parties by the Bank soon after the cheques are cleared.

There will be a daily clearance of cheques accepted and the transactions will be included in the daily account rendered to the Sub-Treasury after the cheques have been cleared.

**NOTE:** The Bank reserved to itself the right to refuse to accept cheque, the collection of which in its opinion, cannot reasonably be undertaken and which it could not accept on behalf of its own constituents.

9. Cheques drawn by Government Officers for drawing funds from the Bank should be addressed to the Bank and not to the Sub-Treasury Officer. Such cheques are negotiable. Until new cheque forms are printed, the required correction may be made in the existing forms in manuscript or rubber stamp. Such alterations do not require attestation. Chequebooks will not be supplied by the Bank. They will be supplied by the Sub-Treasury, as at present.

**NOTE:** Cheques issued by such officers on the Sub-Treasuries Previously and remaining unpaid on the 'appointed date' will be cashed at the Bank direct subject to the rules of Currency etc., The information required by the Bank in this behalf will be furnished by the Sub-Treasury as indicate at para 10 infra.

10. The Sub-Treasury Officer will arrange to forward to the Bank one week in advance of the ' appointed date' the specimen signature of the Government Officers authorized to operate on the P.D. and other accounts at the Sub-Treasury, copies of standing instructions, if any, in the assignment, drawing P.D. Accounts, together with the correspondence pertaining to stopped cheques, etc., should also be forwarded to the Bank on or before the 'appointed date'.

11. All Officers drawing cheques on the Bank should furnish to the Bank on the 'appointed date' a list of their cheques issued prior to the 'appointed date' and outstanding payment on that date by obtaining the necessary information from the Sub-Treasury.

12. Monthly pay bills of Government officers and officers should be presented at the Sub-Treasury for scrutiny three days in advance invariably as prescribed in Article 80, of Karnataka Financial code, 1958. Cheques will be issued for such pay bills in the Sub Treasury and will be delivered on last working day.

**ANNEXURE-B**

Transactions in respect of which the challans cheques or refund orders need not pass through the sub-treasury officers before presentation at the Bank.

**Payments into the Banks**

1. Remittances of Sales-tax in the Special forms prescribed.
2. – do -- Forest revenue.
3. – do -- Civil and Criminal Courts Deposits.
4. – do – Fees, Fines, etc., Criminal Courts.
5. – do -- Food Depots.
6. – do -- Income tax revenue.
7. – do -- Union Excise Duties.
8. – do – Life Insurance Premia relating to Govt.Insurance Dept.
9. – do - into Personal Deposit Accounts kept at the Bank.
10. – do -- of other items of challans which have been signed attested by the Departmental Officer on whose behalf the moneys are credited.
11. – do -- of amounts on special printed forms of challans.
12. – do -- of Land Revenue, Muzarai and Village Panchayat.

**Drawal from the Bank**

1. Cheques drawn by Government Officers on Personal Deposit Accounts kept at the Bank.
2. Cheques drawn by the Officers of the Judicial Deptt. Against Persoanl Ledger Accounts.

3. Cheques drawn by Public Works Department.
4. Cheques drawn by Forest Department.
5. Cheques drawn by Government Commercial Undertakings.
6. Cheques drawn by Government Insurance Department.
7. Cheques drawn by the Chief Accounts Officer, Mysore State Electricity Board.
8. Cheques drawn by the Bursar, Mysore University.
9. Refund Orders of the Income tax Department.
10. Cheques of the Postal Department.
11. Cheques of the Defence Department.
12. Refund Orders of the Sales tax Department.

**N.PRABHAKAR**

PR-153

Under Secretary to Government,
Finance Department (Admn & Adv.).

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**

**ವಿಷಯ :** ಕರ್ನಾಟಕ ಕೃಷಿ ಉತ್ಪನ್ನಗಳ ಬೆಲೆ ಆಯೋಗವನ್ನು ಪುನರ್ ರಚಿಸುವ ಬಗ್ಗೆ- ಆದೇಶಗಳು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 204 ಕೃಉಇ 2001 ಬೆಂಗಳೂರು ದಿನಾಂಕ: 15.06.2001.
2. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 308 ಕೃಉಇ 2001 ಬೆಂಗಳೂರು ದಿನಾಂಕ: 13.02.2002.
3. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 308 ಕೃಉಇ 2001 ಬೆಂಗಳೂರು ದಿನಾಂಕ: 06.06.2002.
4. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 308 ಕೃಉಇ 2001 ಬೆಂಗಳೂರು ದಿನಾಂಕ: 12.06.2003.
5. ಕರ್ನಾಟಕ ಕೃಷಿ ಉತ್ಪನ್ನಗಳ ಬೆಲೆ ಆಯೋಗದ ಅಧಿಕಾರೇತರ ಕಾರ್ಯದರ್ಶಿಯವರ ದಿನಾಂಕ: 15.11.2003ರ ಪತ್ರ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 15.06.2001ರ ಆದೇಶದಲ್ಲಿ ರಾಜ್ಯದಲ್ಲಿ ಕೃಷಿ ಉತ್ಪನ್ನಗಳ ಬೆಲೆ ಆಯೋಗವನ್ನು ಡಾ: ಎಸ್. ಬಿಸಲಯ್ಯ, ಹಿಂದಿನ ಉಪ ಕುಲಪತಿಗಳು, ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ ಇವರ ಅಧ್ಯಕ್ಷತೆಯಲ್ಲಿ ರಚಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 13.02.2002ರ ಆದೇಶದಲ್ಲಿ ರಾಜ್ಯದಲ್ಲಿ ಕೃಷಿ ಉತ್ಪನ್ನಗಳ ಬೆಲೆ ಆಯೋಗದ ಅವಧಿಯನ್ನು ವಿಸ್ತರಿಸಿ, ಸದರಿ ಆಯೋಗದ ಅವಧಿಯನ್ನು 14.06.2002ರವರೆಗೆ ಎಂದು ಮಂಜೂರಾತಿ ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ: 06.06.2002ರ ಆದೇಶದನ್ವಯ ಕೃಷಿ ಉತ್ಪನ್ನಗಳ ಬೆಲೆ ಆಯೋಗದ ಅವಧಿಯನ್ನು 14.06.2003ರವರೆಗೆ ವಿಸ್ತರಿಸಲಾಯಿತು.

ಮೇಲೆ (4)ರಲ್ಲಿ ಓದಲಾದ ದಿನಾಂಕ: 12.06.2003ರ ಆದೇಶದನ್ವಯ ಸದರಿ ಬೆಲೆ ಆಯೋಗದ ಅವಧಿಯನ್ನು ದಿನಾಂಕ: 15.06.2003ರಿಂದ 14.12.2003ರವರೆಗೆ ವಿಸ್ತರಿಸಿ ಮಂಜೂರಾತಿ ಆದೇಶ ಹೊರಡಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಕರ್ನಾಟಕ ಕೃಷಿ ಉತ್ಪನ್ನಗಳ ಬೆಲೆ ಆಯೋಗದ ಅಧಿಕಾರೇತರ ಕಾರ್ಯದರ್ಶಿಯವರ ದಿನಾಂಕ: 15.11.2003ರ ಪತ್ರದಲ್ಲಿ ಸದರಿ ಬೆಲೆ ಆಯೋಗದ ಅವಧಿಯನ್ನು ದಿನಾಂಕ: 15.12.2003ರಿಂದ ವಿಸ್ತರಿಸಬೇಕೆಂದು ಕೋರಲಾಗಿತ್ತು.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 240 ಕೃಉಇ 2004, ಬೆಂಗಳೂರು, ದಿನಾಂಕ: 15ನೇ ಜನವರಿ, 2005**

ರಾಜ್ಯದಲ್ಲಿ ಕೃಷಿ ಉತ್ಪನ್ನಗಳ ಬೆಲೆ ಆಯೋಗವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಲಾಗಿದೆ.

| | | |
|---|---|---|
| 1) | ಡಾ: ಎಸ್. ಬಿಸಲಯ್ಯ,<br>ಹಿಂದಿನ ಉಪಕುಲಪತಿಗಳು,<br>ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು. | ಅಧ್ಯಕ್ಷರು. |
| 2) | ಡಾ: ಆರ್.ಎಸ್. ದೇಶಪಾಂಡೆ,<br>ಪ್ರೊಫೆಸರ್, ಅಗ್ರಿಕಲ್ಚರಲ್ ಡೆವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ಸೋಷಿಯೋ<br>ಎಕನಾಮಿಕ್ ಚೇಂಜ್, ನಾಗರಭಾವಿ, ಬೆಂಗಳೂರು. | ಸದಸ್ಯರು |
| 3) | ಶ್ರೀ ಬಿ.ಆರ್. ಯಾವಗಲ್,<br>ಮಾಜಿ ಸಚಿವರು, ನರಗುಂದ ತಾಲ್ಲೂಕು, ಗದಗ ಜಿಲ್ಲೆ. | ಸದಸ್ಯರು |
| 4) | ಶ್ರೀ ಸಿ.ಬಿ. ಪಾಟೀಲ್,<br>ಓಕಳಿ, ಗುಲ್ಬರ್ಗಾ | ಸದಸ್ಯರು |
| 5) | ಡಾ: ಶೇಷಗಿರಿ,<br>ಅಪರ ಕೃಷಿ ನಿರ್ದೇಶಕರು, ತರಬೇತಿ ಮತ್ತು ಮಾನವ ಸಂಪನ್ಮೂಲ,<br>ಕೃಷಿ ಆಯುಕ್ತಾಲಯ, ಬೆಂಗಳೂರು. | ಅಧಿಕಾರೇತರ ಕಾರ್ಯದರ್ಶಿ |

ಸದರಿ ಬೆಲೆ ಆಯೋಗದ ಕರ್ತವ್ಯಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಅನುಬಂಧ

**ಕೃಷಿ ಬೆಲೆ ಆಯೋಗದ ಕರ್ತವ್ಯಗಳು:**

1) ರಾಷ್ಟ್ರೀಯ ಕೃಷಿ ಬೆಲೆ ಆಯೋಗದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಕೃಷಿ ಉತ್ಪನ್ನಗಳಿಗೂ ರಾಜ್ಯ ಸರ್ಕಾರಕ್ಕೆ ಸಲಹೆ ನೀಡುವುದು. ಅಲ್ಲದೆ, ರಾಜ್ಯ ಸರ್ಕಾರಕ್ಕೆ ರಾಜ್ಯದಲ್ಲಿ ಬೆಳೆದಿರುವ ಬೆಳೆಗಳಿಗೆ ಕನಿಷ್ಟ ಬೆಂಬಲ ಬೆಲೆಯನ್ನು ನಿಗದಿಪಡಿಸಲು ಸಲಹೆ ನೀಡುವುದು.
2) ರಾಷ್ಟ್ರೀಯ ಕೃಷಿ ಬೆಲೆ ಆಯೋಗದ ವ್ಯಾಪ್ತಿಯಲ್ಲಿ ಬಾರದೇ ಇರುವ ಬೆಳೆಗಳಿಗೆ ಕನಿಷ್ಟ ಬೆಂಬಲ ಬೆಲೆಯನ್ನು ನಿಗದಿಪಡಿಸಲು ಸೂಕ್ತ ಶಿಫಾರಸ್ಸು ನೀಡುವುದು.
3) ಮಾರುಕಟ್ಟೆ ಮಧ್ಯ ಪ್ರದೇಶದ ಮೂಲಕ ಸರ್ಕಾರವು ಪ್ರಯೋಗಿಸಬಹುದಾದ ಕೃಷಿ ಉತ್ಪನ್ನಗಳ ಬೆಂಬಲ ಬೆಲೆಯನ್ನು ಶಿಫಾರಸ್ಸು ಮಾಡುವುದು.
4) ಬೆಲೆ ಕಾರ್ಯ ನೀತಿಯನ್ನು ಪರಿಣಾಮಕಾರಿಯಾಗಲು ಬೇಕಾಗುವ ಕ್ರಮಗಳನ್ನು ಶಿಫಾರಸ್ಸು ಮಾಡಲು ಅಂದರೆ, ರಾಜ್ಯದಲ್ಲಿರುವ ಸಂಸ್ಥೆಗಳ ಮೂಲಕ ಹಾಗೂ ಕನಿಷ್ಟ ಬೆಂಬಲ ಬೆಲೆಯ ಮೂಲಕ ಸಕಾಲದಲ್ಲಿ ಖರೀದಿಸಲು ಖರೀದಿ ಕೇಂದ್ರಗಳನ್ನು ತೆರೆಯಲು ಹಾಗೂ ಅವುಗಳ ಗುಣಮಟ್ಟ ಪರೀಕ್ಷಿಸುವುದು ದಾಸ್ತಾನುಗಳಲ್ಲಿ ಸಂಗ್ರಹಿಸುವುದು, ಇತ್ಯಾದಿ ವ್ಯವಸ್ಥೆಗಳಿಗೆ ಸೂಕ್ತ ಮಾರ್ಗನಿರ್ದೇಶನ ನೀಡುವುದು.
5) ಕೃಷಿ ಉತ್ಪನ್ನಗಳನ್ನು ರಾಜ್ಯದಿಂದ ರಫ್ತು ಮಾಡಲು ಬೇಕಾಗುವ ಕ್ರಮಗಳನ್ನು ಶಿಫಾರಸ್ಸು ಮಾಡುವುದು.
6) ಸದ್ಯದಲ್ಲಿರುವ ಕೃಷಿ ಉತ್ಪನ್ನಗಳ ಮಾರುಕಟ್ಟೆ ವ್ಯವಸ್ಥೆಯನ್ನು ಪರಿಶೀಲಿಸಿ, ಉತ್ಪಾದಕರಿಗೆ ಲಾಭದಾಯಕವಾಗುವ ಕ್ರಮಗಳಿಗೆ ಸಲಹೆ ನೀಡುವುದು.
7) ಕೃಷಿ ಉತ್ಪಾದನೆಗಳ ವೆಚ್ಚ ಮತ್ತು ಕೃಷಿ ಉತ್ಪನ್ನಗಳ ಬೆಲೆಯನ್ನು ನಿಗದಿಪಡಿಸಲು ರಾಜ್ಯ ಸರ್ಕಾರಕ್ಕೆ ಕೃಷಿ ನೀತಿ ಹಾಗೂ ಬೆಲೆ ನೀತಿಯನ್ವಯ ಸಕಾಲದಲ್ಲಿ ಸೂಕ್ತ ಮಾರ್ಗದರ್ಶನ ಹಾಗೂ ಶಿಫಾರಸ್ಸುಗಳನ್ನು ನೀಡುವುದು.

**ವಿ. ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್.154

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** ಎಸ್. ನಿಜಲಿಂಗಪ್ಪ ಮೆಮೋರಿಯಲ್ ಟ್ರಸ್ಟ್ ಸ್ಮಾರಕ ಭವನ ನಿರ್ಮಾಣ ಮಾಡಲು ಧನಸಹಾಯ ಕುರಿತು.

**ಓದಲಾಗಿದೆ :** 1. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಸನಿ 4 ಎಸ್.ನಿ. ಟ್ರಸ್ಟ್/ 2004-05 ದಿನಾಂಕ: 27.09.2004.

2. ಅಧ್ಯಕ್ಷರು ಮತ್ತು ಸ್ಥಾಪಕ ಧರ್ಮದರ್ಶಿ ಎಸ್. ನಿಜಲಿಂಗಪ್ಪ ಮೆಮೋರಿಯಲ್ ಟ್ರಸ್ಟ್ ರವರ ಪತ್ರ ದಿನಾಂಕ: 27.06.2004.

**ಪ್ರಸ್ತಾವನೆ:**

ಮೇಲೆ ಉಲ್ಲೇಖ (2)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು ಮತ್ತು ಸ್ಥಾಪಕ ಧರ್ಮದರ್ಶಿ ಎಸ್. ನಿಜಲಿಂಗಪ್ಪ ಮೆಮೋರಿಯಲ್ ಟ್ರಸ್ಟ್, ಚಿತ್ರದುರ್ಗ ಇವರು ಎಸ್. ನಿಜಲಿಂಗಪ್ಪ ಅವರ ಸ್ಮಾರಕ ಭವನವನ್ನು ಐದು ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿಸಲು ಉದ್ದೇಶಿಸಿ ನಿರ್ಮಾಣ ಕಾರ್ಯ ಈಗಾಗಲೇ ಆರಂಭಗೊಂಡಿದ್ದು, ಈಗಾಗಲೇ ರೂ.70,00,000-00 ಲಕ್ಷಗಳನ್ನು ಖರ್ಚು ಮಾಡಲಾಗಿದ್ದು, ಹಣದ ಅಡಚಣೆಯಿಂದ ನಿರ್ಮಾಣ ಕಾರ್ಯ ನಿಂತು ಹೋಗಿದೆ. ಮೊದಲನೇ ಹಂತದ ಕಾರ್ಯ ಪೂರ್ತಿಗೊಳಿಸಲು ಎರಡು ಕೋಟಿ ರೂಪಾಯಿಗಳ ಅವಶ್ಯಕತೆ ಇದ್ದು ಸರ್ಕಾರದ ವತಿಯಿಂದ ಧನಸಹಾಯ ಮಾಡಲು ಕೋರಿರುತ್ತಾರೆ.

ಮೇಲೆ ಉಲ್ಲೇಖ (1)ರಲ್ಲಿ ಕಾಣಿಸಿದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು, ಬೆಂಗಳೂರು, ಇವರು ಎಸ್. ನಿಜಲಿಂಗಪ್ಪ ಟ್ರಸ್ಟ್‌ನವರು ಸಾಧಿಸಿರುವ ಕಾರ್ಯ ಪ್ರಗತಿ ಹಾಗೂ ಟ್ರಸ್ಟ್‌ನವರು ಸಂಪನ್ಮೂಲಗಳನ್ನು ರೂಢಿಸಿಕೊಳ್ಳುವ ಸಾಧ್ಯತೆಯ ಹಿನ್ನೆಲೆಯಲ್ಲಿ, ಪರಿಷ್ಕೃತ ಆಯವ್ಯಯದಲ್ಲಿ ಹೆಚ್ಚುವರಿ ಅನುದಾನವಾಗಿ ಒಂದು ಕೋಟಿ ರೂಪಾಯಿಗಳನ್ನು ಕೆಲವು ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಂಕಇ 19 ಸ್ಮಾಪ್ರನಿ 2004, ಬೆಂಗಳೂರು, ದಿನಾಂಕ: 11ನೇ ಜನವರಿ 2005**

ಮೇಲೆ ಪ್ರಸ್ತಾಪಿಸಿರುವ ಹಿನ್ನೆಲೆಯಲ್ಲಿ ಎಸ್. ನಿಜಲಿಂಗಪ್ಪ ಮೆಮೋರಿಯಲ್ ಟ್ರಸ್ಟ್, ಚಿತ್ರದುರ್ಗ, ಇವರಿಗೆ ಲೇಟ್ ಎಸ್. ನಿಜಲಿಂಗಪ್ಪ ಸ್ಮಾರಕ ಭವನ ನಿರ್ಮಾಣ ಮಾಡಲು ಒಂದು ಕೋಟಿ ರೂಪಾಯಿಗಳನ್ನು (ರೂ.100 ಲಕ್ಷಗಳು ಮಾತ್ರ) ಮಂಜೂರು ಮಾಡಿ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಇವರಿಗೆ ಬಿಡುಗಡೆ ಮಾಡಲಾಗಿದೆ. ಈ ಹಣದ ವೆಚ್ಚದ ಮೇಲ್ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಇವರು ನೋಡಿಕೊಳ್ಳತಕ್ಕದ್ದು.

ಈ ವೆಚ್ಚವನ್ನು ಪ್ರಸಕ್ತ ಸಾಲಿನ ಆಯವ್ಯಯ (2004ರ ಜುಲೈನಲ್ಲಿ ಮಂಡಿಸಲಾದ) ಲೆಕ್ಕ ಶೀರ್ಷಿಕೆ "2205-00-102-2-06-059 ಯೋಜನೆ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆಇ 1138 ವೆಚ್ಚ-5 2004, ದಿನಾಂಕ: 22.07.2004 ಮತ್ತು ಟಿಪ್ಪಣಿ ಸಂಖ್ಯೆ: ಆಇ 2138 ವೆಚ್ಚ-5 2004, ದಿನಾಂಕ: 03.01.2005ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ವಿಶಾಲಾಕ್ಷಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್.155

**ಸಾರಿಗೆ ಸಚಿವಾಲಯ**

**ವಿಷಯ :** ರಾಜ್ಯದಲ್ಲಿನ ಆಟೋರಿಕ್ಷಾಗಳಿಗೆ ಎಲ್.ಪಿ.ಜಿ. ಕಿಟ್, ಅಳವಡಿಸಲು ರೂ 2000/-ಗಳ ಆರ್ಥಿಕ ನೆರವು ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಒಸಾಇ 63 ಟಿಆರ್‌ವಿ 2001, ದಿನಾಂಕ: 01.01.2004.

2. ಸಾರಿಗೆ ಆಯುಕ್ತರ ಪತ್ರ ಸಂಖ್ಯೆ: ಸಾಆ/ಆಸ.1/ ಹಸಿರು ತೆರಿಗೆ ಅನುದಾನ/ 2004-05, ದಿನಾಂಕ: 23.08.2004.

**ಪ್ರಸ್ತಾವನೆ:**

ಮೇಲೆ (2)ರಲ್ಲಿ ಓದಲಾದ ಸಾರಿಗೆ ಆಯುಕ್ತರ ಪತ್ರದಲ್ಲಿ ತಿಳಿಸಿರುವಂತೆ ವಾಯುಮಾಲಿನ್ಯ ತಡೆಗಟ್ಟುವ ನಿಟ್ಟಿನಲ್ಲಿ ಈಗಾಗಲೇ ಉಪಯೋಗದಲ್ಲಿರುವ ಆಟೋರಿಕ್ಷಾಗಳಿಗೆ ಎಲ್.ಪಿ.ಜಿ. ಕಿಟ್ ಅಳವಡಿಸುವುದನ್ನು ಪ್ರೋತ್ಸಾಹಿಸಲು ಹಸಿರು ತೆರಿಗೆ ವಸೂಲಿ ಮೊತ್ತದಿಂದ ಎಲ್.ಪಿ.ಜಿ. ಕಿಟ್ ಅಳವಡಿಸಿಕೊಂಡಂತಹ ಆಟೋರಿಕ್ಷಾಗಳಿಗೆ ಅವರು ಪಡೆದ ಸಾಲದ ಮೇಲಿನ ಬಡ್ಡಿಯನ್ನು ಧನಸಹಾಯ ರೂಪದಲ್ಲಿ ತಲಾ ರೂ.2,000/-ದಂತೆ ನೀಡಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಮಂಜೂರಾತಿ ನೀಡಲಾಗಿತ್ತು. ಹಾಲಿ ವಸೂಲಿಸಲಾಗುತ್ತಿರುವ ಹಸಿರು ತೆರಿಗೆಯನ್ನು -0041 ರಾಜಸ್ವ ಲೆಕ್ಕಶೀರ್ಷಿಕೆಗೆ ಜಮಾ ಮಾಡಲಾಗುತ್ತಿದೆ. ಆದ್ದರಿಂದ, ಈಗಾಗಲೇ ಆಟೋರಿಕ್ಷಾಗಳು ಎಲ್.ಪಿ.ಜಿ. ಕಿಟ್‌ಗಳನ್ನು ಅಳವಡಿಸಿಕೊಂಡಿದ್ದು, ಸದರಿಯವರಿಗೆ ಧನಸಹಾಯವನ್ನು ನೀಡಬೇಕಾಗಿದ್ದು, ಪ್ರಸಕ್ತ ಆರ್ಥಿಕ ವರ್ಷದಲ್ಲಿ ದಿನಾಂಕ: 28.02.2005ರವರೆಗೆ ಸುಮಾರು 16,908 ಆಟೋರಿಕ್ಷಾಗಳಿಗೆ ಎಲ್.ಪಿ.ಜಿ. ಕಿಟ್ ಅಳವಡಿಸಬೇಕಾಗಿದ್ದು, ಈ ಕಾರ್ಯಕ್ಕೆ ರೂ.3,38,16,000/-ಗಳ ಅನುದಾನ ಬಿಡುಗಡೆ ಮಾಡುವಂತೆಯೂ ಹಾಗೂ ನಿಗದಿತ ಲೆಕ್ಕಶೀರ್ಷಿಕೆಯನ್ನು ಸಹ ತಿಳಿಸುವಂತೆ ಕೋರಿರುತ್ತಾರೆ.

ಸಾರಿಗೆ ಆಯುಕ್ತರ ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಾರಿಇ 9 ಸಾಸುಮಾ 2004, ಬೆಂಗಳೂರು, ದಿನಾಂಕ: 15ನೇ ಜನವರಿ, 2005**

**(ಯುನೀಕ್ ಕ್ರಮ ಸಂಖ್ಯೆ: 04/2005, ದಿನಾಂಕ: 13ನೇ ಜನವರಿ, 2005)**

ಸರ್ಕಾರಿ ಆದೇಶ ಸಂಖ್ಯೆ: ಒಸಾಇ 63 ಟಿಆರ್‌ವಿ 2001, ದಿನಾಂಕ: 01.01.2004ರನ್ವಯ ಎಲ್.ಪಿ.ಜಿ. ಕಿಟ್‌ಗಳನ್ನು ಅಳವಡಿಸಿಕೊಂಡಂತಹ ಆಟೋರಿಕ್ಷಾಗಳಿಗೆ ತಲಾ ರೂ.2000/-ಗಳಂತೆ ಧನಸಹಾಯ ರೂಪದಲ್ಲಿ ಪಾವತಿಸುವ ಕಾರ್ಯಕ್ಕೆ ರೂ.2.00 ಕೋಟಿ (ಎರಡು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಲೆಕ್ಕಶೀರ್ಷಿಕೆ 2041-00-800-0-01 "ಆಟೋರಿಕ್ಷಾಗಳಿಗೆ ಎಲ್.ಪಿ.ಜಿ. ಕಿಟ್ ಅಳವಡಿಸಲು"-106 "ರಿಯಾಯಿತಿ" (ಯೋಜನೇತರ) ಇದರಡಿ ಭರಿಸಲು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಿ ಮಂಜೂರಾತಿ ನೀಡಲಾಗಿದೆ. ಸದರಿ ಯೋಜನೆಯನ್ನು ಎಂಪವರ್ ಕಮಿಟಿಯ ಸಭೆಯ ನಿರ್ಧಾರದಂತೆ ಕಾರ್ಯಗತಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1691 ವೆಚ್ಚ-6 2004, ದಿನಾಂಕ: 26.12.2004ರನ್ವಯ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಾಸುದೇವ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

**ANNEXURE TO GOVERNMENT ORDER NO. ಸಾರಿಇ 9 ಸಾಸುಮಾ 2004, DATED: 15.01.2005**

**CONDITIONS**

1) All Autorickshaw cabs registered on or after 01.04.1991 having valid permit to operate in Bangalore City and Retrofitted with LPG Kits approved competent Authority is eligible for the subsidy amount.
2) LPG Kit shall approved by authorized test centers as per C.M.V. Rules and permitted by the Government for fitment in Karnataka.
3) Retrofitment shall be done by the authorized retrofittment center approved by the Government.
4) Regional Transport Officers shall make endorsement the Number of Kit and Cylinder after due verification in the R.C. Book.
5) Regional Transport Officer submit a weekly report containing vehicle Number and Model. Type of Kit and Number, Name of the retrofitment center and date of retrofitment to the Government through Transport Commissioner.
6) Transport Commissioner shall consolidate the report of the Regional Transport Officer and make arrangement to disburse the subsidly amount by way of cheque to the concerned retrofitment center.
7) Regional Transport Officer shall be responsible for the correctness of the report regarding retrofitment.
8) Transport Commissioner shall be responsible for proper disbursement of subsidy amount to the retrofitment centers after proper verification.
9) Retrofitment centers shall keep a proper account of subsidy amount received by them and maintain the details of vehicles. This shall be produced for verification to the Government through Transport Commissioner as desired by the Government.
10) The LPG Kit fitted shall not be replaced or removed without prior permission from the Regional Transport Office, failure to do so, action will be initiated as per law.

**B. VASUDEVA**
Under Secretary to Government,
Transport Department.

PR-156